ಜೀವನದ ವಿವಿಧ ಸಮಸ್ಯೆಗಳ ಬಗ್ಗೆ ಗಾಂಧೀಜಿಯ ವಿಚಾರಗಳನ್ನು ಅವರ ಭಾಷಣ ಲೇಖನಗಳಿಂದಲೇ ಆಯ್ದು, ಸಂಗ್ರಹಿಸಿದ ಪುಸ್ತಕ.
ಕ್ರೌನ ಪುಟ, ಬೆಲೆ: ೪-೮-೦
ಅಧ್ಯಾತ್ಮ ಕಾರ್ಯಾಲಯ ಹುಬ್ಬಳ್ಳಿ

# ಕರ್ಮವೀರ

ಸಂಪಾದಕರು:
ಹ. ರಾ. ಪುರೋಹಿತ, ಎಂ. ಎ.

ವಚನಶಾಸ್ತ್ರ ರಹಸ್ಯ
ಲೇ: ಶ್ರೀ. ರಂ. ರಾ. ದಿವಾಕರ
ಕರ್ನಾಟಕದ ಉಪನಿಷತ್ತುಗಳೆನಿಸಿದ ಶಿವಶರಣ ವಚನಗಳ ಬಗ್ಗೆ ವಿಚಾರ ಪರಿಪೂರ್ಣ ಹಾಗು ಪಾಂಡಿತ್ಯ ಪೂರ್ಣ ವಿವೇಚನೆ.
ಬೆಲೆ: ೫ ರೂಪಾಯಿ
ಅಧ್ಯಾತ್ಮ ಕಾರ್ಯಾಲಯ ಹುಬ್ಬಳ್ಳಿ

—ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ—

—( ಸಂಪುಟ ೧೯ )—

Editor
H. R. Purohit, M. A.

ಹುಬ್ಬಳ್ಳಿ ಸೋಮವಾರ ತಾರೀಖು ೬—೧೦—೧೯೪೭

—( ಸಂಚಿಕೆ ೨೬ )—

# ಜಗತ್ತಿಗೊಂದು ಅಂತರ್ರಾಷ್ಟ್ರೀಯ ಸರಕಾರ ಅವಶ್ಯಕ

ಈಗ ಸಂಯುಕ್ತ ರಾಷ್ಟ್ರಸಂಘದ ವಾರ್ಷಿಕ ಸಭೆಗೆ ಜಗತ್ತಿನ ಪ್ರಮುಖ ರಾಜ್ಯಭಾರ ಧುರೀಣರು ಮತ್ತು ರಾಜತಂತ್ರಜ್ಞರು ನ್ಯೂಯಾರ್ಕಿಗೆ ನಡೆದಿದ್ದಾರೆ. ಇದೊಂದು ಗ್ರಹಸಂಧಿಯ ಸಮ್ಮೇಲವೇ ಎನ್ನಬೇಕು; ಏಕೆಂದರೆ, ರಾಷ್ಟ್ರಸಂಘಕ್ಕೆ ತಾನು ಅಮಲಿನಲ್ಲಿ ತರಲಸಮರ್ಥವೆನಿಸಬಹುದಾದ ನಿರ್ಣಯಗಳನ್ನು ಸ್ವೀಕರಿಸಬೇಕಾದ ಪರಿಸ್ಥಿತಿ ಬಂದೊದಗಿದೆ. ಅದರ ಫಲಿತಾಂಶವಾಗಿ ಸದ್ಯದ ತೊಂದರೆ ತಾಪತ್ರಯಗಳು ಇನ್ನೂ ಹೆಚ್ಚಾಗುವ ಸಂಭವವಿದೆ.

## ತನ್ನ ಪಾಲಿಗೆ ತಾನೇ ಮೃತ್ಯು

ಸಂ. ರಾ. ಸಂಘವು ಸ್ವಭಾವತಃ ತನಗೆ ತಾನೇ ಮೃತ್ಯುವಾಗಿದೆ. ಸಂ. ರಾ. ಸಂಘ ಇಲ್ಲವೆ ಹಿಂದಿನ ರಾಷ್ಟ್ರಸಂಘದಂತಹ ಸಾರ್ವಭೌಮ ರಾಜ್ಯಗಳ ಜಗದಗಲದ ಕೂಟವೊಂದನ್ನು ಕಟ್ಟಬೇಕಾದರೆ ಒಂದು ಅಥವಾ ಅನೇಕ ಮಹಾಪ್ರಭುತ್ವಗಳ ಇಚ್ಛೆ ಹಾಗೂ ಹಿಂಸಾತ್ಮಕ ಆಕ್ರಮಣದ ವಿರುದ್ಧ ಸಾಂಪ್ರತರಾಜ್ಯಸೀಮಾವ್ಯವಸ್ಥೆಯನ್ನು ಕಾಯ್ದುಕೊಳ್ಳುವ ಸಾಮರ್ಥ್ಯ ಇವುಗಳ ನೆಲಗಟ್ಟಿರುವುದು ಅತ್ಯವಶ್ಯವಾಗಿದೆ. ೧೯೧೮ರ ನಂತರ ಸಾಮರ್ಥ್ಯ ಸಮತೋಲವನ್ನು ಉರುಳಿಸಬಹುದಾದ ಬದಲಾವಣೆಗಳು ವರ್ಸೇಲ್ಸ ಶಾಂತಿ ಸಂಧಾನದ ಪ್ರಕಾರ ರಚಿಸಲಾದ ಯೂರೋಪಿನ ನಕ್ಷೆಯಲ್ಲಿ ತಲೆದೋರದಂತೆ ನೋಡಿಕೊಳ್ಳುವುದರ ಸಲುವಾಗಿ ಬ್ರಿಟನ್ ಮತ್ತು ಫ್ರಾನ್ಸ ದೇಶಗಳು ಜಿನೀವಾದಲ್ಲಿಯ ರಾಷ್ಟ್ರಸಂಘದಲ್ಲಿ ತಮ್ಮ ವರ್ಚಸ್ಸನ್ನು ಬೀರಿನಿಂತವು. ಮೇಲಿನ ದೇಶಗಳು ಉಕ್ತೋದ್ದೇಶವನ್ನು ನೆರವೇರಿಸಲು ಹಿಂದೆಗೆದಾಗ ಜರ್ಮನಿ, ಜಪಾನು ಮತ್ತು ಇಟಲಿ ದೇಶಗಳು ಒಂದೊಂದಾಗಿ ಸಂಘದಿಂದ ಹೊರಬಿದ್ದು ತಮ್ಮ ವಿಸ್ತರಣ ಕಾರ್ಯವನ್ನು ಬಲಪಡಿಸುತ್ತ ಹೋಗಿ ಕೊನೆಗೆ ದ್ವಿತೀಯ ಮಹಾಯುದ್ಧಕ್ಕೆ ಆಹುತಿಯಾದವು.

ಸ್ಥಾಪನೆಯ ಕಾಲದಲ್ಲಿ ಐದು ಅಥವಾ ನಿಜವಾಗಿಯೂ ಬಲಿಷ್ಠ ರಾಷ್ಟ್ರಗಳೆನಿಸಿದ ಸಂ. ಸಂಸ್ಥಾನ, ಇಂಗ್ಲೆಂಡು, ಮತ್ತು ರಶಿಯ ಈ ಮೂರರ ನಡುವೆ ಐಕ್ಯವಿದೆಯೆಂಬ ನಂಬಿಗೆಯಿಡಲಾಗಿತ್ತು. ಆ ಐಕ್ಯಕ್ಕೆ ಸಾಂಪ್ರತ ಪರಿಸ್ಥಿತಿಯನ್ನು ಹಾಗೇ ಕಾಯ್ದುಕೊಳ್ಳುವುದೇ ಹಿನ್ನೆಲೆಯಾಗಿತ್ತು. ಏಕೆಂದರೆ, ಏನಾದರೂ ಬದಲಾವಣೆಯಾಗುವುದಾದರೆ ಅದು ಬಲಿಷ್ಠ ರಾಷ್ಟ್ರಗಳಲ್ಲೊಂದರ ಹಿತಕ್ಕೆ ಧಕ್ಕೆ ತರದಿರದು. ಮತ್ತು ಆ ಕಾರಣದಿಂದ ಅಂತಹ ರಾಷ್ಟ್ರವು ಅದನ್ನು ಪ್ರತಿಭಟಿಸಿ ಐಕ್ಯ ಭಂಗಕ್ಕೆ ಅಡ್ಡಿಯನ್ನುಂಟುಮಾಡದಿರದು ಎಂದು ತಿಳಿಯಲಾಗಿತ್ತು.]

ಪ್ರತಿಷೇಧಾಧಿಕಾರವನ್ನು ಬಲಿಷ್ಠ ರಾಷ್ಟ್ರಗಳ ಐಕ್ಯ ನಿರೀಕ್ಷೆಯ ಆಧಾರದ ಮೇಲೆ ಸ್ವೀಕರಿಸಲಾಗಿತ್ತು. ಸಂ. ರಾ. ಸಂಘವು ಸಾರ್ಥಕವಾಗಿ, ಪರಿಣಾಮಕಾರಿಯಾಗಿ ನಿಲ್ಲುವಂತಾಗಬೇಕಾದರೆ ಬಲಿಷ್ಠ ರಾಷ್ಟ್ರತ್ರಯದಲ್ಲಿ ಐಕ್ಯವಿದ್ದೇ ತೀರಬೇಕೆಂಬುದನ್ನು ಪ್ರತೀಷೇಧಾಧಿಕಾರ ಪರಿಗ್ರಹವು ಸ್ಮರಣೆಗೆತರುವಂಥದಷ್ಟೇ ಆಗಿದೆ. ಅದನ್ನು ಪ್ರಯೋಗಿಸಬಾರದೆಂದೇ ಸಾನ್‌ಫ್ರಾನ್ಸಿಸ್ಕೋದ ಮಹಾಪಟವು ಪ್ರತಿಷೇಧಾಧಿಕಾರ ಪರಿಗ್ರಹಕ್ಕೆ ಎಡೆಗೊಟ್ಟಿತು. ಏಕೆಂದರೆ ಪ್ರತಿಷೇಧಾಧಿಕಾರವನ್ನು ಪ್ರಯೋಗಿಸಿದೊಡನೆಯೇ ಮಹಾಪ್ರಭುತ್ವಗಳಲ್ಲಿ ಒಮ್ಮತವಿಲ್ಲವೆಂಬುದು ಸೂಚಿತವಾಗುತ್ತದೆ ಮತ್ತು ಅದನ್ನು ಒಂದು ಪ್ರಭುತ್ವವು ಪದೇಪದೇ ಈಗಿನಂತೆ ಬಳಸಿದಾಗ ಸಂಘದ ಅಸ್ತಿತ್ವಕ್ಕೇ ಧಕ್ಕೆ ತರುವಂತಹ ಒಡಕುಂಟಾಗಿದೆಯೆಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ.

ಸಂಯುಕ್ತ ರಾಷ್ಟ್ರಸಂಘದ ಭದ್ರತಾಮಂಡಲದಲ್ಲಿ ರಶಿಯವು ಮೇಲಿಂದಮೇಲೆ ಪ್ರತಿಷೇಧಾಧಿಕಾರವನ್ನು ಪ್ರಯೋಗಿಸಿದುದು ಒಂದು ಅಪೂರ್ವ

## ರಾಷ್ಟ್ರಗಳ ವಿಸ್ತರಣ ಧೋರಣ ಖಂಡನೀಯ—ಪ್ರತಿಷೇಧಾಧಿಕಾರದ ದುರುಪಯೋಗ ತ್ಯಾಜ್ಯ— ಒಮ್ಮತವೇ ಮಾನವಕುಲದ ಪ್ರಗತಿಯ ತಳಹದಿ—

ಜಗತ್ತು ಇಬ್ಬಣವಾಗಿ ಅನೈಕ್ಯವುಂಟಾಗಿ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿ ಕುಂಠಿತವಾಗಿದೆ. ಪ್ರತಿಷೇಧಾಧಿಕಾರ ತೆಗೆವ ಪ್ರಯತ್ನ ನಡೆದರೆ ಸಂ. ರಾ. ಸಂಘದ ಮೂಲಭೂತ ತತ್ವಗಳ ಆಧಾರದ ಮೇಲೆ ರಶಿಯವು ಅದನ್ನು ಪ್ರತಿಷೇಧಿಸದಿರದು. ಆದುದರಿಂದ ಅಮೇರಿಕ ತನ್ನ ಪ್ರಭಾವ ಪ್ರಯೋಗದಿಂದ ರಶಿಯವನ್ನು ಪ್ರತಿಭಟಿಸುವುದನ್ನು ನಿಲ್ಲಿಸಿ ರಶಿಯ ಸಹಿತವಾದ ಅಂತರಾಷ್ಟ್ರೀಯ ಸರಕಾರವೊಂದನ್ನು ಸ್ಥಾಪಿಸುವಂತೆ ಪ್ರಯತ್ನವೆಸಗಿ ಇಂದು ಜಗತ್ತನ್ನು ಎದುರಿಸುತ್ತಿರುವ ಅತ್ಯುಗ್ರ ಸಮಸ್ಯೆಗಳಾದ ಆಹಾರವಿತರಣ, ಅಣುಶಕ್ತಿ ನಿಯಂತ್ರಣ, ಮಹಾಯುದ್ಧದಲ್ಲಿ ಸೋತರಾಷ್ಟ್ರಗಳ ಆರ್ಥಿಕೋದ್ಯಮದ ಪುನರುಜ್ಜೀವನ, ಕಲಹಾಸಕ್ತ ರಾಷ್ಟ್ರಗಳಲ್ಲಿ ಶಾಂತಿ ಸ್ಥಾಪನೆ ಮೊದಲಾದವನ್ನು ಬಗೆಹರಿಸಲು ಮುಂದೆ ಬರಬೇಕೆಂದು ಜಗದ್ಧಿತೇಚ್ಛುಗಳೂ ಅಮೇರಿಕದ ಅದ್ವಿತೀಯ ಬರಹಗಾರರೂ ಆದ ಲುಯಿಫಿಶರರು ಸಾರಿ ಹೇಳುತ್ತಾರೆ.

ಘಟನೆಯಾಗಿಲ್ಲ—ಆಗಲಾರದು. ರಶಿಯ ಮತ್ತು ಅಮೇರಿಕಗಳ ನಡುವೆ ಕೊರಿಯಾ ವಿಭಕ್ತವಾದುದಕ್ಕೆ ಕಾರಣವಾದ, ಜರ್ಮನಿ ಮತ್ತು ಆಸ್ಟ್ರಿಯಗಳನ್ನು ರಶಿಯ ಹಾಗೂ ಪಾಶ್ಚಾತ್ಯ ಆಕ್ರಮಕ ರಾಷ್ಟ್ರಗಳು ತಮ್ಮಲ್ಲಿ ಹಂಚಿಕೊಂಡುದಕ್ಕೆ ಮತ್ತು ಬಾಲ್ಕನ್ ಪರ್ಯಾಯ ದ್ವೀಪದಲ್ಲಿ ಶತ್ರು ಶಿಬಿರವೆರಡು ಸ್ಥಾಪಿತವಾದುದಕ್ಕೆ ಹೇತುವಾದ ಹಗೆತನವನ್ನು ಪ್ರತಿಷೇಧಾಧಿಕಾರವು ಪ್ರತಿಬಿಂಬಿಸುತ್ತದೆ, ಪ್ರಕಾಶಪಡಿಸುತ್ತದೆ. ಅದಲ್ಲದೆ ಆ ಅಧಿಕಾರದ ನಿತ್ಯ ಬಳಕೆಯು ಯುರೋಪನ್ನು ಮಾರ್ಶಲ್ ಯೋಜನೆಗೆ ಸೇರುವ ಹಾಗೂ ಸೇರಲಪ್ಪಣೆಪಡೆಯದ ಎಂಬ ಎರಡು ಶತ್ರುರಾಷ್ಟ್ರ ಸಮೂಹಗಳನ್ನಾಗಿ ವಿಂಗಡಿಸಿದ ಘಟನೆಗೂ ಬೀಜವೆನಿಸಿದೆ.

### ಸಂಘವನ್ನು ಮೀರಿದ ಕಾರ್ಯಾಚರಣೆ

ರಶಿಯದ ಸಾಮ್ರಾಜ್ಯವಾದದ ವಿರುದ್ಧ ತೆಗೆದುಕೊಳ್ಳಲಾಗುವ ಸಂ. ರಾ. ಸಂಘದ ಎಲ್ಲ ಕ್ರಮಗಳನ್ನೂ "ಗ್ರಾಮಿಕೋಕರಿಸಲು" (ನಿರೋಧಿಸಲು) ಅದರ ಪ್ರತಿಷೇಧಾಧಿಕಾರವು ಇಂಬುಗೊಟ್ಟಿರುವುದರಿಂದ ಮಾಸ್ಕೋವೈಟರ ಆಕ್ರಮಣವನ್ನು ತಡೆಯಬೇಕಾಗುವುದು. ಗ್ರೀಸು ಮತ್ತು ತುರ್ಕಿಯಲ್ಲಿ ಸಂ. ಸಂಸ್ಥಾನವು ಆ ರೀತಿ ಮಾಡಿದೆ. ಬಾಲ್ಕನ ರಾಷ್ಟ್ರಗಳಿಗೆ ಸಂ. ರಾ. ಸಂಘದ ಪರೀಶೀಲನಸಮಿತಿಯೊಂದನ್ನು ಕಳಿಸುವುದರವಿರುದ್ಧ ರಶಿಯ ಪ್ರಯೋಗಿಸಿದ ಪ್ರತೀಷೇಧಾಧಿಕಾರವು, (ಪ್ರಮಾಣವೇನಾದರೂ ಬೇಕಾಗಿದ್ದರೆ,) ಗ್ರೀಸ್ ಮತ್ತು ತುರ್ಕಿಗಳು ರಶಿಯವನ್ನು ತಡೆಯಲು ನೆರವೀವಂತಹ ಯಾವ ಸೂಚನೆಯನ್ನು ಸಂಘ ಮಾಡಿದ್ದರೂ ಅದನ್ನು ಪ್ರತಿಷೇಧಿಸುತ್ತಿತ್ತೆಂಬುದನ್ನು ಸಿದ್ಧ ಮಾಡಿ ತೋರಿಸುತ್ತದೆ. ಈಗ ರಶಿಯದ ಬೆದರಿಕೆಗೆ ಸೊಪ್ಪು ಹಾಕದೆ ನಿಂತು ಅದಕ್ಕೆ ಎಣ್ಣೆಯ ಸವಲತ್ತು ಕೊಡಕೂಡದೆಂದು ಅಮೇರಿಕವು ಇರಾನಿಗೆ ಪ್ರೋತ್ಸಾಹ ಕೊಡುತ್ತಿದೆ. ಸಂ. ರಾ. ಸಂಘವು ಒಮ್ಮೆ ಇರಾನಿನ ಪ್ರಶ್ನೆಯನ್ನು ಬಗೆಹರಿಸಿಬಿಟ್ಟಿದೆ. ಆದರೆ ಅದು ಪುನಃ ನಮ್ಮಲ್ಲಿ ತಲೆಯೆತ್ತಿದೆ ಮತ್ತು ಮಧ್ಯಪೂರ್ವದಲ್ಲಿ ಪ್ರವೇಶಿಸುವ ಯೋಜನೆಯನ್ನು ರಶಿಯವು ಬಿಟ್ಟುಕೊಡುವ ವರೆಗೆ ಅದು ಅತ್ಯಂತ ತೀಕ್ಷ್ಣವಾಗಿಯೂ ಉಳಿಯುತ್ತದೆ. ಇರಾನಿನ ಪ್ರಶ್ನೆಯನ್ನು ಸಂ. ರಾ. ಸಂಘದಲ್ಲಿ ಎತ್ತುವುದು ಕೇವಲ ನಿರರ್ಥಕವೆನಿಸೀತು. ಅದರಿಂದ ನಿಮ್ಮ ವಿರುದ್ಧ ನೀನೇ ಮತದಾನ ಮಾಡಿರೆಂದು ರಶಿಯನ್ನರಿಗೆ ಹೇಳಿದಂತಾಗುತ್ತದೆ.

### ಎರಡು ವ್ಯಾಹತಿಗಳು

ಒಂದು ಬಲಿಷ್ಠ ರಾಷ್ಟ್ರವು ಸದ್ಯದ ಸಾಮರ್ಥ್ಯ ಸಮತೋಲಕ್ಕೆ ಅಹ್ವಾನವಿತ್ತಿರುವಾಗ ಮಹಾಪ್ರಭುತ್ವಗಳ ಐಕ್ಯವನ್ನು ಉಳಿಸಿಕೊಳ್ಳಲು ಸಾಧ್ಯವಿಲ್ಲ; ಮತ್ತು ಬಲಿಷ್ಠ ರಾಷ್ಟ್ರಗಳ ಒಮ್ಮತವಿಲ್ಲದೆ ಸಂ. ರಾ. ಸಂಘದ ಕೆಲಸ ನಡೆಯದು. ವಿಭಕ್ತ ಪ್ರಪಂಚವನ್ನಿಟ್ಟುಕೊಂಡು ಸಂಯುಕ್ತ ರಾಷ್ಟ್ರಸಂಘವನ್ನು ಪ್ರಭಾವಶಾಲಿಯಾಗಿ ಉಳಿಸಿಕೊಳ್ಳಲು ಸಾಧ್ಯವಿಲ್ಲ. ವಿಜ್ಞಾನದ ಪ್ರಗತಿಯಿಂದ ಮತ್ತು ಆರ್ಥಿಕ ಅವಶ್ಯಕತೆಗಳಿಂದ ಒಂದು ಕಡೆ ಒಂದು ಗೂಡಿಸುವ ಪ್ರಯತ್ನ ನಡೆಯುತ್ತಿದ್ದರೆ, ಜಗತ್ತು ಇಂದು ರಾಜಕಾರಣದ ಖಡ್ಗದಿಂದ ಮತ್ತೊಂದೆಡೆ ಇಬ್ಭಾಗವಾಗುತ್ತಿದೆ.

ಹೀಗೆ ಪ್ರಪಂಚ ವಿಯುಕ್ತವಾಗಿರುವಾಗ ಸಂಯುಕ್ತ ರಾಷ್ಟ್ರಸಂಘ ವೆಂತಿರಬಲ್ಲದು?

ಆದುದರಿಂದ ಸಂ. ರಾ. ಸಂಘದ ಅಡಿಗಲ್ಲಿನಂತಿರುವ ತತ್ವಪಟವನ್ನು ತಿದ್ದುವುದಷ್ಟೇ ಪ್ರತಿಷೇಧಾಧಿಕಾರವನ್ನು ತೆಗೆದು ಹಾಕಲು ಸಾಲದು. ಮೊಟ್ಟ ಮೊದಲನೆಯದಾಗಿ, ಪ್ರತೀಷೇಧಾಧಿಕಾರವನ್ನು ಕಿತ್ತೆಸೆವುದರ ವಿರುದ್ಧವಾಗಿ ಸಂ. ರಾ. ಸಂಘದ ತತ್ವಪಟದ ಆಧಾರದ ಮೇಲೆ ರಶಿಯವು ಪ್ರತೀಷೇಧಾಧಿಕಾರವನ್ನು ಪ್ರಯೋಗಿಸಬಹುದು. ಅದು ಹೇಗೇ ಇದ್ದರೂ ಭದ್ರತಾ ಮಂಡಲದಲ್ಲಿ ರಶಿಯನರ ಪ್ರತೀಷೇಧಾಧಿಕಾರದ ಸದುಪಯೋಗ ದುರುಪಯೋಗಗಳೇ ಸಂಯುಕ್ತ ರಾಷ್ಟ್ರತ್ವವೆಂಬ ಭ್ರಾಂತಿಯಲ್ಲಿ ಅಡಗಿರುವ ವಿಯುಕ್ತ ರಾಷ್ಟ್ರತ್ವದ ಅಪರಿಹಾರ್ಯವಾದ, ಅನಿವಾರ್ಯವಾದ ರೋಗಚಿಹ್ನವೆನ್ನದಿರಲಾಗದು. ಜಗತ್ತು ಐಕ್ಯಘಟಿತವಾಗಿದ್ದರೆ ಪ್ರತಿಷೇಧಾಧಿಕಾರಕ್ಕೆ ಯಾವ ಪ್ರಾಮುಖ್ಯವೂ ಇರುತ್ತಿದ್ದಿಲ್ಲ. ಜಗತ್ತು ಏಕೀಭೂತವಾಗಿಲ್ಲದಿರುವುದರಿಂದ ಜೊತೆಗೆ ಇನ್ನೂ ಅನೇಕ ಘಟನೆಗಳು ಸಂಭವಿಸದೆ ಕೇವಲ ಪ್ರತೀಷೇಧಾಧಿಕಾರ ನಿರಾಸದಿಂದ ಅದು ಏಕೀಭವಿಸದೆಂಬುದು ಸ್ವತಃ ಸಿದ್ಧವಾದುದು. ಜಪಾನು, ಗ್ರೀಸು, ಜರ್ಮನಿ, ಆಸ್ಟ್ರಿಯ, ಅಣುಶಕ್ತಿ, ಆರ್ಥಿಕ ಸ್ಥಿರತೆ ಮತ್ತು ವ್ಯಕ್ತಿಸ್ವಾತಂತ್ರ್ಯ ಇತ್ಯಾದಿಗಳಿಗೆ ಸಂಬಂಧಿಸಿದ ಸಮಸ್ಯೆಗಳ ಮೇಲೆ ರಶಿಯ ಮತ್ತು ತದಿತರ ರಾಷ್ಟ್ರಗಳೊಳಗೆ ಒಪ್ಪಂದವಾಗಬೇಕು; ರಶಿಯ ಮತ್ತು ಅಮೇರಿಕದ ಸಂಯುಕ್ತ ಸಂಸ್ಥಾನಗಳು ರಾಷ್ಟ್ರೀಯ ವಿಸ್ತರಣ ಅಥವಾ ಸಾಮ್ರಾಜ್ಯವಾದದ ಎಲ್ಲ ಆಲೋಚನೆಗಳನ್ನು ಬಿಟ್ಟುಕೊಟ್ಟು ನಿಜವಾದ ಅಂತರ್ರಾಷ್ಟ್ರೀಯತೆ ಹಾಗೂ ಪ್ರಪಂಚ ಸರಕಾರವನ್ನು ಅಂಗೀಕರಿಸಲು ಸಿದ್ಧವಾಗಬೇಕು. ಅಲ್ಲಿಯವರೆಗೆ, ರಶಿಯ ಅಮೇರಿಕಗಳು ಮೇಲೆ ಹೇಳಿದಂತೆ ನಡೆದುಕೊಳ್ಳುವ ವರೆಗೆ ಸಂಯುಕ್ತರಾಷ್ಟ್ರಸಂಘವೆಂಬುದೊಂದು ಸಂಘವೇ ಅಲ್ಲವೆನ್ನಬೇಕಾಗುವುದು; ಅದೊಂದು ಕೇವಲ ಅಪ್ರಯೋಜಕ ಸಂಸ್ಥೆಯಾಗಿ ಉಳಿಯುವುದು.

### ರಶಿಯವನ್ನು ಹೊರಗೆ ಹಾಕಿದರೆ?

ಪ್ರತಿಷೇಧಾಧಿಕಾರ ನಿರಾಸವನ್ನೆತ್ತಿ ಹಿಡಿವವರಲ್ಲಿ ಯಾರೂ ತಮ್ಮ ನಿಲುವಿನ ಎಲ್ಲ ಅರ್ಥವನ್ನು ತಿಳಿದುಕೊಂಡವರಿಲ್ಲ. ಚೆನ್ನಾಗಿ ವಿವೇಚಿಸಿ ನೋಡಿದರೆ ಅವರ ಪ್ರಕಾರ ರಶಿಯವಿಲ್ಲದ ಸಂಯುಕ್ತ ರಾಷ್ಟ್ರ ಸಂಘವನ್ನು ಅವರು ಅಪೇಕ್ಷಿಸುವರೆಂದು ಅರ್ಥವಾಗುತ್ತದೆ. ಇಂದಿನ ಸಂ. ರಾ. ಸಂಘದ ಸಭೆಗೆ ಬಂದಿರುವ ಅನೇಕ ರಾಷ್ಟ್ರಗಳ ಪ್ರತಿನಿಧಿಗಳ ತಲೆಯನ್ನು ಇದೇ ಪ್ರಶ್ನೆಯು ತಿನ್ನುತ್ತಿರಬೇಕೆಂಬುದರಲ್ಲಿ ಸಂಶಯವಿಲ್ಲ.

ಪ್ರತಿದಿನದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಸುದ್ದಿಗಳನ್ನು ಅವಲೋಕಿಸಿದ ಬಹಳಜನ ರಾಜತಂತ್ರ ವಿಶಾರದರಿಗೆ ಮತ್ತು ಸಾಮಾಜಿಕರಿಗೆ ರಶಿಯದ ಸಾಮ್ರಾಜ್ಯಕ್ಕೂ ಪ್ರಜಾಪ್ರಭುತ್ವ ಪ್ರಪಂಚಕ್ಕೂ ಸದ್ಯಕ್ಕಂತೂ ಒಪ್ಪಂದವಾಗುವ ಸಂದರ್ಭವಿಲ್ಲೆಂದು ಎನಿಸುವುದು ಸಹಜವಾಗಿದೆ. ಆದರೆ ದೊಡ್ಡ ದೊಡ್ಡ, ಅತ್ಯಂತಿಕ ಪರಿಣಾಮವನ್ನುಂಟುಮಾಡುವ ಸಮಸ್ಯೆಗಳನ್ನು ಬಗೆಹರಿಸುವುದು ಅನೇಕ ಸರಕಾರಗಳ ಅಥವಾ ಬಹುಜನರ ಸ್ವಭಾವದಲ್ಲೇ ಬಂದಿಲ್ಲ. ಅವರು ಪಾಕ್ಷಿಕ ಪ್ರಶ್ನೆಗಳನ್ನು ಅವು ಬಂದಾಗ ಎದುರಿಸಿ ಬಗೆಹರಿಸಿಕೊಳ್ಳುವುದರಲ್ಲೇ ಮಗ್ನವಾಗುವ ಸ್ವಾಭಾವವುಳ್ಳವಾದುದರಿಂದ ಸಂಯುಕ್ತ ರಾಷ್ಟ್ರಸಂಘದ ಸಭೆಯು ಪಾಲಿಸ್ತಾನ, ಗ್ರೀಸು, ಹೊಸ ಸದಸ್ಯರು ಮತ್ತು ಇತರ ಇಪ್ಪತ್ತಾರು ವಿಷಯಗಳ ಮೇಲೆ ಚರ್ಚೆ ನಡೆಸುತ್ತದೆ; ಮತ್ತು ಹಾಗೆ ಚರ್ಚೆ ನಡೆಯುತ್ತಿರುವ ಕಾಲದಲ್ಲಿ ಪ್ರತಿನಿಧಿಗಳು ಒಳಗೊಳಗೆ ರಶಿಯದ ವಿಚಾರವಾಗಿ ಮಾತನಾಡುತ್ತ ಸಂ. ರಾ. ಸಂಘವು ರಶಿಯ ಮತ್ತು ರಶಿಯೇತರ ಪ್ರಪಂಚಗಳ ನಡುವೆ ಬಿರುಕುಂಟಾದ ಮೇಲೂ ಬದುಕಬಲ್ಲುದೇ? ಎಂದು ಅಚ್ಚರಿಬಡುತ್ತ ಕುಳಿತುಕೊಳ್ಳುವರು! ಒಬ್ಬರಿಗೂ ಒಡಕಿನ ಮೂಲಭೂತ ಕಾರಣವನ್ನೆತ್ತಿ ಮಾತನಾಡುವ ಧೈರ್ಯ ಬರದು; ಏನಾದರೂ ಒಂದು ವೇಳೆ ಎತ್ತಿದರೂ ಒಮ್ಮಿಂದೊಮ್ಮೆ ಪ್ರತಿಷೇಧಾಧಿಕಾರವು ಪ್ರಯೋಗಿಸಲ್ಪಡಬಹುದು. ವಿಪಕ್ಷದ ಪ್ರತಿನಿಧಿಗಳ ಪರಸ್ಪರ ಟೀಕೆಯ ಸುರಿಮಳೆಯಿಂದ ಯಾವ ಕಾರ್ಯವೂ ಸಾಧಿಸದೆ 'ಬರಿ ಗುಲ್ಲು ನಿದ್ದೆಗೇಡು' ಎಂಬಂತಾಗಬಹುದು. ಪುನಃ ಸಭೆಯನ್ನು ಮುಂದುವರಿಸಿಬಿಟ್ಟರೆ ಮುಗಿದು ಹೋಯಿತು; ಮತ್ತೆ ಮುಂದೆ ನೋಡೋಣ ಎಂದು ಪ್ರತಿನಿಧಿಗಳು ತಣ್ಣಗಾಗುತ್ತಾರೆ.

ಸಂಯುಕ್ತರಾಷ್ಟ್ರಸಂಘದ ಆರ್ಥಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಮಿತಿ, ಅಂತರ್‌ರಾಷ್ಟ್ರೀಯ ವ್ಯಾಪಾರ ಸಮಿತಿ, ಪುನರುದ್ಧಾರ ಪುನರ್ನಿವೇಶನ ಸಮಿತಿ, ಕಾರ್ಯಸಮಿತಿ, ಆಹಾರ ಮತ್ತು ಒಕ್ಕಲುತನಗಳ ಸಮಿತಿ ಇವುಗಳ ಕಾರ್ಯಕಲಾಪಗಳಲ್ಲಿ ಹಾಗೂ ಅಂತರರಾಷ್ಟ್ರೀಯ ನಿಧಿ, ಜಾಗತಿಕ ಬ್ಯಾಂಕು ಮತ್ತು ಮಾರ್ಶಲ್ ಯೋಜನೆ ಮೊದಲಾದ ಮಾನವ ಕುಲದ ವಾಸ್ತವಿಕ ಸಂತ್ರಾಸ ಸಂಕಷ್ಟಗಳನ್ನು ನಿವಾರಿಸುವ ಪ್ರಶ್ನೆಗಳತ್ತ ಸಭೆಗೆ ಬಂದಿರುವ ಪ್ರತಿನಿಧಿಗಳು ಬಹುಶಃ

— ೬ ನೇ ಪುಟಕ್ಕೆ

# ಪುಸ್ತಕ ಮತ್ತು ವಿಮರ್ಶೆ

## ಕಳೆದ ಪುಟಗಳು

ಪ್ರಕಾಶಕರೂ ಬರೆದವರೂ ಶ್ರೀ ರಾಮಚಂದ್ರ ವಿನೀತರು ( ಬೆಳಗಾವಿ ರಾಮಚಂದ್ರ ರಾಯರು ) "ವಿಫ್ರೀಶನ್", ರೈಟರ ಓಣಿ, ಧಾರವಾಡ. ಪುಟಗಳು ೬೭, ಬೆಲೆ ರೂ. ೧।.

ಮೋಲಿನದೊಂದು ಕವನಸಂಗ್ರಹ. ಹಿಂದಿನ 'ಜಯಕರ್ನಾಟಕ'ದ ಸಂಪಾದಕರಾದ ಇಂದಿನ ಶ್ರೀ 'ರಾಮಚಂದ್ರ ವಿನೀತರು' ಕನ್ನಡಿಗರಿಗೆ ಅಪರಿಚಿತರಲ್ಲ. ಅವರ ಈ ಕವನ ಸಂಗ್ರಹದಲ್ಲಿ ಅವರ ಬಾಳಿನ ಇತಿಹಾಸದಲ್ಲಿಯ ಬಹು ಅಮೂಲ್ಯವಾದ ಅನುಭವಗಳ ಸಾರವನ್ನು ಕಾವ್ಯ ರೂಪದಲ್ಲಿ ನಾವು ಕಾಣಬಹುದು. ಈ 'ಕಳೆದ' ಅರ್ಥಾತ್ ಕಳೆದುಳಿದ ಬಾಳುವೆಯ ಪುಟಗಳಲ್ಲಿರುವ ಕವನಗಳ ಬಗ್ಗೆ ಶ್ರೀ ಬೇಂದ್ರೆಯವರು ಮುನ್ನುಡಿಯಲ್ಲಿ ದೋಷವಾಗಬಹುದೆಂದು ಹೇಳಿರುವ 'ಅರ್ಥದಲ್ಲಿ ಸಂಕೇತಮಯತೆ, ಶಬ್ದಾರ್ಥದಲ್ಲಿ ಯೌಗಿಕತೆ, ಶಬ್ದದಲ್ಲಿ ನಾದಮಯ ಛಾಂದಸಿಕತೆ ಭಾವಗಳ ಆದರ್ಶವಾದ, ವಿಷಯದ ಸ್ವಪ್ನಮಯ ಆವರಣ' ಇವುಗಳನ್ನು ಗುಣಗಳೆಂದೇ ಮತ್ತೊಂದು ದೃಷ್ಟಿಯಿಂದ ಹೇಳಬಹುದಾಗಿದೆ. ಅರ್ಥಪೂರ್ಣ ಮತ್ತು ಭಾವಗರ್ಭಿತ ಕವನಗಳಲ್ಲಿ ಹೀಗೆ ಓದುಗರ ಕಲ್ಪನೆಯನ್ನು ಚೆನ್ನಾಗಿ ಪರೀಕ್ಷೆಗೆ ಗುರಿಮಾಡುವ ಸಂಗತಿಗಳು ಬರುವುದು ಸಹಜ. ಶ್ರೀ ಬೇಂದ್ರೆಯವರ ಕವನಗಳಲ್ಲೂ ಹಲವೆಡೆ ಇಂತಹವುಗಳ ನಿದರ್ಶನಗಳು ದೊರಕುತ್ತವೆ.

'ನೋಡು-ಮಾಟ' ಎಂಬುದರಲ್ಲಿ ವಿರೋಧಾಭಾಸದಂತೆ ತೋರುವ ದೈವ ಲಿಪಿಯನ್ನು ಚೆನ್ನಾಗಿ ವರ್ಣಿಸಲಾಗಿದೆ. 'ಎರಡು ಶಕ್ತಿಗಳು' ಎಂಬ ಕವನದಲ್ಲಿ ದೈವೀ ಹಾಗೂ ಆಸುರೀಶಕ್ತಿಗಳ ಕಾರ್ಯಗಳ ಚಿತ್ರ ಬಂದಿದೆ.

ಕವಿಗೆ ಜನಕನ "ಮುಂತಿಗೆ"ಗಳ ಮೇಲೆ ಬಹಳ ಮಮತೆಯಿದ್ದಂತೆ ತೋರುತ್ತದೆ. 'ಕುರುಹ'ದಲ್ಲಿ ಇಂತಹ ಶೈಲಿಗೆ ಎಡೆಗೊಡಲಾಗಿದೆ. ಸರ್ಪ ಭೂಷಣ ಶಿವಯೋಗಿಗಳ ತಾತ್ವಿಕ ಪದಗಳಂತೆ 'ಪಶ್ಚಾತ್ತಾಪ ಪೂತ'ವು ರಚಿಸಲ್ಪಟ್ಟಿದೆ. 'ಕೊಳಲು' ಮತ್ತು 'ಶ್ರೀ ಅರವಿಂದರಿಗೆ' ಎಂಬವುಗಳಲ್ಲಿ ದೈವಭಕ್ತಿ ಹಾಗೂ ಗುರುಕೃಪಾ ಫಲಗಳು ಹೃದಯಂಗಮವಾಗಿ ವರ್ಣಿಸಲ್ಪಟ್ಟಿವೆ. 'ಪ್ರತಿಭೆ'ಯ ಬೇಟಬಿಲ್ಲದ ಕೂಟ ಮೊದಲಾದ ಕಾರ್ಯಗಳು ಆಧುನಿಕ ವಿಜ್ಞಾನದ ಅದ್ಭುತ ಕಾರ್ಯಗಳಂತೆ ಅಥವಾ ಮೋಡಿಗಾರನ ಮಾಂತ್ರಿಕ ಕಾರ್ಯಗಳಂತೆ ಅಚ್ಚರಿಗೊಳಿಸುವಂತಿವೆ. '—ಗೆ' ಯಲ್ಲಿ ಕವಿಯ ಪ್ರಾಸ ಪ್ರಿಯತೆಯ ಉತ್ತಮ ಉದಾಹರಣೆಯನ್ನು ಕಾಣಬಹುದು. 'ಓರ್ವದೇವಿ'ಯ ಚಿತ್ರವು ಒಳ್ಳೆಯ ನವೀನ ರೀತಿಯದಿದೆ. 'ಒಲ್ಲೆನಹೊ ನಲ್ಲೆ ನಹೊ' ಎಂಬಲ್ಲಿಯ ಮಾತೃಪ್ರೇಮ ಬಹು ಮುದ್ದಾಗಿ ವಿಸ್ತರಿಸಲ್ಪಟ್ಟಿದೆ. 'ವಾಮದೇವ' 'ಭಾವದೇವಿ'ಗಳಲ್ಲಿ ಭಾವೋನ್ನತಿಯುಂಟು. 'ಕಾರಸಿರಿ'ಯೊಂದು ಸಿರಿಗಬ್ಬ.

ಇನ್ನೂ ಚಿಕ್ಕ ಚಿಕ್ಕ ಕವನಗಳು ಚಿಕ್ಕ ತಾರೆಗಳಂತೆ ಹೊಳೆಯುತ್ತಿವೆ. ಕವಿಯ ಸಂಸ್ಕಾರ ಸಂಪನ್ನತೆ, ತಾತ್ವಿಕ ತೇಜಸ್ಸು, ರಚನಾ ಚಾತುರ್ಯ ಇವುಗಳನ್ನು ಹೆಜ್ಜೆ ಹೆಜ್ಜೆಗೂ ಈ ಕವನಗಳಲ್ಲಿ ಕಾಣಬಹುದು. ಆಯಾ ಕವನಗಳ ನಿರ್ಮಿತಿಕಾಲವನ್ನು ನಿರ್ದೇಶಿಸಿರುವುದರಿಂದ ಗ್ರಂಥಕರ್ತನ ಹೃದಯದ ವಿವರ್ತಕಾರ್ಯವನ್ನು ಸೂಕ್ಷ್ಮವಾಗಿ ನಿರೀಕ್ಷಿಸಲು ಅವಕಾಶ ಉಂಟಾಗಿದೆ. ಕವಿಯ ತತ್ವಜ್ಞಾನ ಪರತೆಯನ್ನು ಎಲ್ಲೆಡೆಯೂ ಕಾಣಬಹುದು. "ಕೂಡ್ಲ, ಮೂಡ್ಲ" ಮುಂತಾದ ಕೆಲವನ್ನು ಬಿಟ್ಟರೆ ಇಲ್ಲಿ ಗ್ರಾಮ್ಯಪ್ರಯೋಗಗಳು ಕಡಿಮೆ. ಅದರಿಂದ ಶೈಲಿಯ ಓಜಸ್ಸು ನಿಚ್ಚಳವಾಗಿ ತೋರುವಂತಾಗಿದೆ. ಅಧುನಿಕ ನಾವೀನ್ಯಮೃಗಯಾ ಕುತೂಹಲದಿಂದ ಛಂದೋಭಂಗ, ಶ್ರುತಿಪೇಶಲತೆಯ ತಿರಸ್ಕಾರ, ಅನಿಮಿತ್ತ ಯತಿಭಂಗ, ಅಕಾರಣ ವ್ಯಾಕರಣ ನಿಯಮೋಲ್ಲಂಘನ ಇವಾವುವೂ ಕಂಡುಬರುವುದಿಲ್ಲ. ಆದುದರಿಂದ ಸ್ವಚ್ಛಂದ ಮಾರ್ಗದಲ್ಲಿ ಕವನಗಳನ್ನು ಬರೆಯುವ ಇಂದಿನ ಕೆಲ ನಿರಂಕುಶರಾದ ಅಲ್ಪಜ್ಞರಿಗೆ ಇದೊಂದು ಪಠ್ಯಪುಸ್ತಕವಾಗಬಹುದಾಗಿದೆ. ಹೊಸ ಕನ್ನಡದ ಹೊಸಬಗೆಯಲ್ಲಿದ್ದೂ ಈ ಕವನ ಸಂಗ್ರಹವು ಅಭಿಜಾತ ಸಾಹಿತ್ಯ ಕೃತಿಗಳ ಸಾಲಿಗೆ ಸೇರಬಹುದಾಗಿದೆ. ಆದುದರಿಂದ ಇಂತಹ ಸತ್ಕೃತಿ ಸಂಪೂರ್ಣವಿದ್ದು ಭವ್ಯತೆಯ ಪುಟ್ಟಿ ಪನ್ನು ಮುಟ್ಟಿದ 'ಕಳೆದ ಪುಟಗಳ'ನ್ನು ಬರೆದ ಶ್ರೀ ರಾಮಚಂದ್ರ ವಿನೀತರು ಕನ್ನಡ ರಸಿಕರ ಅಭಿನಂದನೆಗೆ ಅರ್ಹರೆಂದು ನಿರ್ದಾಕ್ಷಿಣ್ಯವಾಗಿ ಹೇಳಬಹುದು.

## ಲೇಖನ ಕಲೆ

ಬರೆದವರು ಶ್ರೀ ಮಿರ್ಜಿ ಅಣ್ಣಾರಾಯರು. ಪ್ರಕಾಶಕರು ಶ್ರೀ ದ. ಬಾ. ಕುಲಕರ್ಣಿಯವರು, ಮನೋಹರ ಗ್ರಂಥ ಭಾಂಡಾರ, ಧಾರವಾಡ ಪುಟ ೨೦೭, ಬೆಲೆ—ಸಾದಾ ಪ್ರತಿ ರೂ. ೨, ಸುಂದರ ಪ್ರತಿ ರೂ. ೩.

ಇದೊಂದು ಶಾಸ್ತ್ರೀಯವಾದ ಬರಹವೆನಿಸಿಕೊಳ್ಳಹೋದ ಗ್ರಂಥ. ಇದರ ಒಳಪಿಡಿಯ ಪ್ರಕಾರ ಈ 'ಲೇಖನಕಲೆ'ಯಲ್ಲಿ ೨೨ ಪ್ರಕರಣಗಳಿವೆ; ಜೊತೆಗೆ ಅನುಬಂಧವೂ ಅನುಬದ್ಧವಾಗಿದೆ. ಲೇಖಕತ್ವದ ವಿದ್ಯಾರ್ಥಿದಶೆಯಲ್ಲಿ ಶ್ರೀ ಅಣ್ಣಾರಾಯರು ಓದಿದ ಪುಸ್ತಕಗಳಿಂದ ಅರಿತ ಅಭಿಪ್ರಾಯಗಳ, ಊಹಿಸಿಕೊಂಡ ಕಲ್ಪನೆಗಳ, ಆಲೋಚಿಸಿದ ಸಂಗತಿಗಳ ಪ್ರಕಾಶನವನ್ನು ಕೆಲವೆಡೆ ಸುಸಂಗತವಾಗಿಯೂ ಕೆಲವೆಡೆ ವಿಸಂಗತವಾಗಿಯೂ ಈ ಪುಸ್ತಕದಲ್ಲಿ ಮಾಡಲಾಗಿದೆ.

೯ನೆಯ ಪುಟದಲ್ಲಿ "ಅನುಭವವು ಪ್ರತ್ಯಕ್ಷಾನುಭವ ಪರೋಕ್ಷಾನುಭವ ಎಂದು ಎರಡು ವಿಧ" ಎಂದು, ೧೧ನೆಯ ಪುಟದಲ್ಲಿ ಸಾಹಿತಿಗೆ ಸಹಜವಾಗಿಯೇ ಕಾಣುವ ಸೃಷ್ಟಿಯ ವೈಶಾಲ್ಯವನ್ನು ವಿವರಿಸುತ್ತ ಪಂಚೇಂದ್ರಿಯಗಳಿಗೆ ಗೋಚರಿಸುವ ದೃಶ್ಯಸೃಷ್ಟಿ ಇತ್ಯಾದಿಗಳನ್ನು ಹೇಳಿ "ಸಾಧುಗಳಿಗೆ ತೋರುವ ಅಲೌಕಿಕಸೃಷ್ಟಿ, ಯೋಗಿಗಳಿಗೆ ಗಮ್ಯವಾದ ಸತ್ಯಸೃಷ್ಟಿಗಳೂ ಇರುವವು," ಎಂದು ಶ್ರೀ ಅಣ್ಣಾರಾಯರು ಬರೆಯುತ್ತಾರೆ. ಸಾಧುಗಳಿಗೆ ಮತ್ತು ಯೋಗಿಗಳಿಗೆ ಗಮ್ಯಗಳಾದ ಸೃಷ್ಟಿಗಳು ಪ್ರತ್ಯಕ್ಷ ಪರೋಕ್ಷಗಳಲ್ಲಿ ಯಾವುದಕ್ಕೆ ಗಮ್ಯಗಳಾಗುವುವು? ೯ನೆಯ ಪುಟದ ಸಿದ್ಧಾಂತದಂತೆ ಅವೆರಡರಲ್ಲೊಂದರೊಳಗೆ ಯೌಗಿಕ ಮತ್ತು ಅಲೌಕಿಕ ಪ್ರತ್ಯಕ್ಷಗಳು ಬರಬೇಕಾಗುತ್ತದೆ. ಆದರೆ ಇದು ಮನುಷ್ಯ ಜಾತಿಯ ತರ್ಕಬುದ್ಧಿಗೆ ಒಪ್ಪಲಸಾಧ್ಯವಾದ ನಿರ್ಣಯವಾಗಿದೆ. ಏಕೆಂದರೆ, ಸಾಮಾನ್ಯಲೇಖಕರನಲ್ಲಿ ಯೋಗಿತ್ವ ಸಾಧುತ್ವಗಳಿರುವುದು ಅಸಂಭವ. ಅಸಾಧಾರಣ ಲೇಖಕರನ್ನೇ ಲೇಖಕನೆಂದು ಗ್ರಂಥಕರ್ತರು ವರ್ಣಿಸುತ್ತಿದ್ದರೆ ಪ್ರಸ್ತುತಗ್ರಂಥವನ್ನು ಇಷ್ಟು ಲಂಬವಾಗಿಬರೆವ ಅಗತ್ಯವಿದ್ದಿಲ್ಲ; ಒಂದೇ ಮಾತಿನಲ್ಲಿ "ಲೇಖಕನಾದವನು ಯೋಗಿ ಸಾಧುಗಳಂತೆ, ಅಲೌಕಿಕದರ್ಶನವುಳ್ಳವನೂ, ಅತಿ ಮಾನವವೂ ವಿಶ್ವವ್ಯಾಪಿಯೂ ಆದ ಅನುಭವವುಳ್ಳವನೂ ಆಗಿರಬೇಕು" ಎಂದರೆ ಸಾಕಾಗುತ್ತಿತ್ತು. ಅದಲ್ಲದೆ ಪ್ರತ್ಯಕ್ಷ ಪರೋಕ್ಷಗಳಿಗೂ ಅಲೌಕಿಕಾನುಭೂತಿಗೂ ಮಹದಂತರವಿದೆ. ಅತಿ ಮಾನವ ಇಲ್ಲವೆ ದಿವ್ಯವೆನಿಸುವ ದೃಷ್ಟಿಗೆ, ಅನುಭವಕ್ಕೆ ಯೌಗಿಕದೃಷ್ಟಿ ಅಪರೋಕ್ಷಾನುಭೂತಿ ಎಂಬುದಾಗಿ ತತ್ವಶಾಸ್ತ್ರದ ಸುಪ್ರಸಿದ್ಧ ಹೆಸರುಗಳಿವೆ. ಈ ತೃತೀಯ ಚಕ್ಷುಸ್ಸು ಇಂದ್ರಿಯ ಪ್ರತ್ಯಕ್ಷ ಅಥವಾ ಪರೋಕ್ಷದೊಳಗೆ ಅಡಕವಾಗುವ ಬಗೆ ಹೇಗೆ? ಅಲ್ಲದೆ ಬ್ರಹ್ಮಾಸ್ವಾದಕ್ಕೆಸದೃಶವಾದರೂ ಅದರಿಂದ ರಸಾಸ್ವಾದವು ಭಿನ್ನವೆಂದು ಜಗತ್ಪ್ರಸಿದ್ಧ ಸಿದ್ಧಾಂತ ಮತ್ತು ಅನುಭವಗಳಿರುವಲ್ಲಿ ತೃತೀಯವಾದ ಅಲೌಕಿಕ ಚಕ್ಷುಸ್ಸು ಲೌಕಿಕ ಲೇಖಕನಿಗಿದೆ ಅಥವಾ ಇರಬೇಕೆಂದು ಹೇಳುವುದು ಶಾಸ್ತ್ರಜ್ಞಾನವುಳ್ಳವರ ಮಾತೆನಿಸೀತೆ?

ಮೇಲಿನವರಂತೆ ಶಾಸ್ತ್ರೀಯ ವಾಕ್ಯ ರಚನೆಯ ಬಿಗುಹಿಲ್ಲದ, ಶಿಥಿಲವೂ ಸಂದಿಗ್ಧವೂ ಆದ ಶೈಲಿಯಲ್ಲಿ, ಅಜೀರ್ಣ ರೂಪದಲ್ಲಿ ಮತ್ತು ಅಪರೂಪದಲ್ಲಿ ಇನ್ನೂ ಕೆಲ ವಿಷಯಗಳನ್ನು ವಿವರಿಸಲಾಗಿದೆ. ಶಾಸ್ತ್ರಕಾರರಾಗಿ ಬರೆಯ ಹೊರಟ ಗ್ರಂಥಕರ್ತರು ಸೀಫಲ, ಸುಳುಹು, ಸೃಜನಾಶಕ್ತಿ, ಯಥಾತಥ್ಯ, ಅಲ್ಹಾದ, ಮಾಯಾಲಾಂದರು, ಕಮಲು, ಬಳಿಕೆ ಮೊದಲಾದ ಅಪಭ್ರಂಶಗಳನ್ನು ಪ್ರಯೋಗಿಸಿ ೪೬ ನೆಯ ಪುಟದಲ್ಲಿ "ಸದ್ಯಕ್ಕೆ ಜನರು ಬರಹದಲ್ಲಿ ಬಳಸುವ ವಾಕ್ಯಗಳು ಅಶುದ್ಧವೆಂದು ಹೇಳುವ ಅಧಿಕಾರವಾದರೂ ಯಾರಿಗಿದೆ?" ಎಂಬ ಪ್ರಶ್ನೆ ಹಾಕುತ್ತಾರೆ. ಅದಕ್ಕೆ 'ಜನರಿಗೇ ಆ ಅಧಿಕಾರವಿದೆ'ಯೆಂದು ಈ ಸ್ವಯಂಕೃತ ಜನ ಪ್ರತಿನಿಧಿಗಳಾದ ಗ್ರಂಥಕರ್ತರಿಗೆ ಸಮಾನ ಸ್ಥಾನದಿಂದೇಕೆ ಉತ್ತರ ಕೊಡಬಾರದು?

ಅಲ್ಲದೆ, ತರ್ಕವಿವೇಚನೆಯಿಲ್ಲದೆ ಸಿದ್ಧ ಪೀಠದಿಂದ ಕುಳಿತು ಹೇಳುವಂತೆ "ಸತ್ಯವು ನಿರ್ಗುಣ ನಿರಾಕಾರವಾಗಿದ್ದು ಎಲ್ಲ ಇಂದ್ರಿಯಗಳ ಅನುಭವದಿಂದ ಕಟ್ಟಿದ ಸಿದ್ಧಾಂತ ರೂಪವಾಗಿದೆ" ಎಂದು ಹೇಳುವಲ್ಲಿ ತಾವೇ ಹಿಂದೆ ಒಪ್ಪಿದ ಅಲೌಕಿಕ ಪ್ರತ್ಯಕ್ಷಕ್ಕೆ ವ್ಯಾಘಾತವನ್ನು ತಂದೊಡ್ಡಿದ್ದಾರೆ. ಹೀಗೆ ಇನ್ನೂ ಒಂದೆರಡು ಪ್ರಬಲವಾದ ಅಪಸಿದ್ಧಾಂತಗಳಿವೆ.

ಇಂತಹ ದೋಷಗಳು ಸಂಖ್ಯೆಯಲ್ಲಿ ಕಡಿಮೆಯಿದ್ದರೂ ಉಳಿದ ಗುಣಪ್ರಕಾಶದ ಹೊಳಪನ್ನು ಗ್ರಹಣದಂತೆ ಕುಂದಿಸುತ್ತವೆ. ಸಹೃದಯತೆಯ ಮೇಲಿನ ಈ ಆಘಾತವನ್ನುಳಿದರೆ ಪುಸ್ತಕದ್ದೆಲ್ಲ ಚೆನ್ನಾಗಿದೆ. ಅಲ್ಪಸಂಸ್ಕೃತರೂ, ಅನಧಿಕೃತರೂ, ಅಲ್ಪಜ್ಞರೂ, ಸರ್ವಜ್ಞಂಮನ್ಯರೂ ವಿಶೃಂಖಲ ವೃತ್ತಿಯಿಂದ ಲೇಖನಗಳನ್ನು ಬರೆದು ತೂರುತ್ತಿರುವ ಈ ಕಾಲದಲ್ಲಿ ಇಂತಹಬೋಧಕ ಗ್ರಂಥಗಳು ಎಷ್ಟು ಹೊರಟರೂ ಕಡಿಮೆಯೇ ಆಗಿರುವದರಿಂದ ವಿಚಾರವನ್ನು ಕೆರಳಿಸುವ ಉಕ್ತಗ್ರಂಥವನ್ನು ಜಿಜ್ಞಾಸುಗಳು ಸ್ವಾಗತಿಸದಿರಲಾರರೆಂದು ನಮ್ಮ ನಂಬಿಗೆ.

## ಭಾರತೀಯರ ವಿಜ್ಞಾನೋಪಾಸನ

ಬರೆದವರು:-ಶ್ರೀ ಪದ್ಮನಾಭ ಪುರಾಣಿಕ, ಉಸ್ಮಾನಿಯಾ ವಿಶ್ವವಿದ್ಯಾಲಯ. ಪ್ರಕಾಶಕರು:- ಕರ್ನಾಟಕ ಸಾಹಿತ್ಯ ಮಂದಿರ A (5) 97 ಬಾಗ್ ಲಿಂಗಂಪಲ್ಲಿ, ಹೈದ್ರಾಬಾದು (ದಕ್ಷಿಣ) ಪುಟಗಳು ೧೪೪, ಬೆಲೆ ೧-೮-೦

ಪ್ರಗತಿಗೆ ವಿಜ್ಞಾನವೇ ಕಾರಣ. ಆದ್ದರಿಂದ ಪ್ರಗತಿಯನ್ನು ಹೊಂದಬೇಕಾದಲ್ಲಿ ವಿಜ್ಞಾನದ ಅಭ್ಯಾಸವು ಅವಶ್ಯ. ಅದು ಅದಷ್ಟು ಮಾತೃಭಾಷೆಯಲ್ಲಿದ್ದರೆ ಅದರ ರಸ ಹೀರಿಕೊಳ್ಳುವದಕ್ಕೆಸರಳ. ಇನ್ನೂ ಕನ್ನಡ ಭಾಷೆಯಲ್ಲಿ ವಿಜ್ಞಾನ ವಿಷಯದಲ್ಲಿ ಬರವಣಿಗೆಗಳು ಅತಿ ವಿರಳ; ಕಾರಣ, ಉಳಿದ ಭಾಷೆಗಿಂತಲೂ ಹಿಂದುಳಿದಿದೆ. ಇದನ್ನರಿತು ಕೆಲವು ವಿಜ್ಞಾನ ಸಾಹಿತ್ಯೋಪಾಸಕರು ಆ ದಿಶೆಯಲ್ಲಿ ಕೆಲಸ ಪ್ರಾರಂಭಿಸಿದ್ದಾರೆ. ಅವರಲ್ಲಿ ಶ್ರೀಮಾನ್ ಪುರಾಣಿಕರೊಬ್ಬರಾಗಿದ್ದಾರೆ. ಅವರು ತಮ್ಮ ವಿಜ್ಞಾನ ಸೇವೆಯನ್ನು 'ಕರ್ನಾಟಕ ಸಾಹಿತ್ಯ ಮಂದಿರ'ದ ಮುಖಾಂತರವಾಗಿ ಸಾಗಿಸಿದ್ದಾರೆ. ಇದು ಸ್ತುತ್ಯ ಉಪಕ್ರಮ.

ಅವರು ಬರೆದ ಈ ಪುಸ್ತಕವು ಗಾತ್ರದಲ್ಲಿ ಅತಿ ಸಣ್ಣದಿದ್ದರೂ ಬಹಳ ವಿಷಯಗಳನ್ನೊಳಗೊಂಡಿದೆ. ಇದಕ್ಕೆ ಅವರು ಸಾಕಷ್ಟು ಬರವಣಿಗೆ ಹಾಗೂ ಪ್ರಕಾಶನಗಳನ್ನು ಆಧಾರಗಳನ್ನಾಗಿಟ್ಟುಕೊಂಡು ಬರೆದಿದ್ದಾರೆ. ಇದರಲ್ಲಿ (೧) ಪ್ರಾಚೀನ ಹಾಗೂ (೨) ಅರ್ವಾಚೀನವೆಂಬ ವಿಭಾಗಗಳನ್ನು ಮಾಡಿ ವೇದಕಾಲದಿಂದ ಮೊದಲು ಮಾಡಿ ೧೯೪೦ರ ವರೆಗಿನ ಭಾರತದಲ್ಲಿಯ ವಿಜ್ಞಾನದ ಬೆಳವಣಿಗೆಯನ್ನು ಸ್ವಲ್ಪದರಲ್ಲಿ ವಿವರಿಸಿದ್ದಾರೆ. ಅವರು ಇಷ್ಟು ಕಾಲದಲ್ಲಿಯ ವಿಜ್ಞಾನದ ಪ್ರಗತಿಯನ್ನು ಅತಿ ಸ್ವಲ್ಪದರಲ್ಲಿ ಬರೆಯದೆ ಬೇರೆ ಬೇರೆ ಎರಡು ಪುಸ್ತಕ ರೂಪದಲ್ಲಿ ಬರೆದಿದ್ದರೆ ಒಳಿತಾಗುತ್ತಿತ್ತು. ವೈಜ್ಞಾನಿಕ ಸಂಶೋಧನೆಗಳ ಬಗ್ಗೆ ಭಾರತೀಯರಲ್ಲಿದ್ದ ಆಸಕ್ತಿಯನ್ನು ನಾವು ಇದರಲ್ಲಿ ಕಂಡುಕೊಳ್ಳಬಹುದು, ಕೆಲವೊಂದು ಸಂದರ್ಭಗಳಲ್ಲಿ ಭಾರತೀಯ ವಿಜ್ಞಾನಿಗಳು ಈಗ ಅತಿ ಪ್ರಗತಿ ಹೊಂದಿದಂಥ ಪಾಶ್ಚಾತ್ಯ ವಿಜ್ಞಾನಿಗಳನ್ನು ಹಿಮ್ಮೆಟ್ಟಿಸಿದ್ದಾರೆಂಬುದು ಸ್ಪಷ್ಟವಾಗಿದೆ. ಅದೇನೆ ಇದ್ದರೂ ಕಾಲಮಾನ ಪರಿಸ್ಥಿತಿಗನುಸಾರವಾಗಿ ನಮ್ಮಲ್ಲಿಯ ವಿಜ್ಞಾನವು ಕೆಲವು ಕಾಲ ತಡೆಹಿಡಿದಿತ್ತು. ೨೦ನೆಯ ಶತಮಾನದಿಂದ ಮತ್ತೆ ಅದಕ್ಕೆ ಮೂರ್ತ ಸ್ವರೂಪ ಬಂದಿದೆಯೆಂಬುದನ್ನು ನಾವು ಇದರಲ್ಲಿ ನೋಡುತ್ತೇವೆ.

ವೈಜ್ಞಾನಿಕ ಶಬ್ದಗಳನ್ನು ಕನ್ನಡದಲ್ಲಿ ಚೆನ್ನಾಗಿ ರೂಪಾಂತರಿಸಿದ್ದಾರೆ. ಅವೆಲ್ಲವುಗಳ ಪಟ್ಟಿಯನ್ನು ಕೊನೆಯಲ್ಲಿ ಕೊಟ್ಟಿದ್ದರೆ ಒಳಿತಾಗುತ್ತಿತ್ತು. ಲೇಖಕರು ಪುಸ್ತಕ ಬರೆವಾಗ ಬೇರೆ ಬೇರೆ ಪತ್ರಿಕೆಗಳಲ್ಲಿ ಕಾಲ ಕಾಲಕ್ಕೆ ಬಂದ ಲೇಖನಗಳನ್ನು ಆಧರಿಸಿದ್ದಾರೆಂಬುದು ಸ್ಪಷ್ಟವಿದೆ. ಆದರೆ ಆ ಲೇಖನಗಳಲ್ಲಿ ಉಕ್ತವಾದ ಮೂಲ ಗ್ರಂಥಗಳ ಪರಿಶೀಲನೆಯನ್ನು ಲೇಖಕರು ಮಾಡಿದಂತಿಲ್ಲ. ಅದರಿಂದ ಸಂಸ್ಕೃತ ಶ್ಲೋಕಗಳ ಅವತರಣಿಕೆಗಳನ್ನು ಕೊಡುವಾಗ ಕೂಡ ಅನೇಕ ತಪ್ಪುಗಳು ಉಂಟಾಗಿವೆ. ಇಂಥ ಮಹತ್ವದ ಗ್ರಂಥವನ್ನು ಬರೆವಾಗ ಕೇವಲ ಪತ್ರಿಕಾಲೇಖನಗಳನ್ನೇ ಆಧರಿಸುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ.

## ರಕ್ತಾಂಜಲಿ

ಬರೆದವರು ಶ್ರೀ ವಿ. ಜಿ. ಭಟ್ಟ, ಕಡತೋಕೆ ಪ್ರಕಾಶಕರು ಶ್ರೀ ಮ. ಗ. ಶೆಟ್ಟಿ, ಅಂಕೋಲೆ. ಪುಟ ೯೦ ಬೆಲೆ ರೂ. ೧.

'ರಕ್ತಾಂಜಲಿ'ಯೊಂದು ಕವನಸಂಗ್ರಹ. ಇದರಲ್ಲಿ ೪೬ ಕವನಗಳಿವೆ. 'ಅರ್ಪಣ' ದಲ್ಲೇ ಕವಿಯ ಹೊಸ ಬಾಳಿನ ಆಸೆ ಒಡಮೂಡಿದೆ. 'ಕ್ರಾಂತಿ' ಬಾವುಟ', 'ಆ ದಿನ', 'ರಣಭೈರವಿ', 'ಕೆಂಗನಸು', 'ಮಾತಿನಲ್ಲಿ ಮೋಕ್ಷ', 'ಅವತಾರ' ಮೊದಲಾದ ರುದ್ರಗೀತಗಳಲ್ಲಿ ರಕ್ತಾಂಜಲಿಯು ಅನ್ವರ್ಥವಾಗಿ ಎದ್ದು ಕಾಣುತ್ತದೆ. ಇಂದಿನ ಬಾಳಿನ ಬಗೆಗೆ ಇರುವ ಅತೃಪ್ತಿಯೇ ಇವುಗಳ ಹಿನ್ನೆಲೆ. ಶಾಂತಿಪ್ರಿಯರೆಂದು ಹೇಳಿಕೊಂಬುವರು 'ಪ್ರಗತಿಶೀಲ'ವೆಂದು ಇವುಗಳನ್ನು ಕಂಡು ಮೂಗು ಮುರಿಯಬಹುದು. ವಿಚಾರಶೀಲರೂ ಪ್ರಾಮಾಣಿಕರೂ ಇವುಗಳಲ್ಲಿಯ ಭಾವವನ್ನು ತಮ್ಮದನ್ನಾಗಿ ಮಾಡಿಕೊಳ್ಳದಿರರು. ದೇಶಪ್ರೇಮ ದೀನೋದ್ಧಾರ, ಡಾಂಭಿಕ ಜೀವನದ ಬಗ್ಗೆ ತಿರಸ್ಕಾರ ಇವು 'ನಮ್ಮವರು,' 'ಜಗಳ,' 'ಹೊತ್ತಿಗೆ ಹುಳ' ಮುಂತಾದವುಗಳಲ್ಲಿ ಪ್ರಾದುರ್ಭವಿಸಿವೆ. 'ಗುಬ್ಬಿಯ ಗೂಡು' ಮೊದಲಾದುವುಗಳಲ್ಲಿ ಕರುಣವಿಕಾಸಕಾಣುತ್ತದೆ; ಮಾನವ ಹೃದಯದ ವಿಶಾಲ ಮಾನವತೆಯನ್ನು ಕೆಣುಕುತ್ತದೆ, ಕಸವಿಸಿಗೊಳಿಸುತ್ತವೆ. ಭಾವಸಹಜವಾದ ಗಂಡು ಶೈಲಿ ಕವಿತೆಗಳಲ್ಲಿದೆ. ಶಕ್ತನಾದ ಈ ಕವಿ ಅಲ್ಲಲ್ಲಿ ತಲೆದೋರುವ ಛಂದೋಭಂಗಗಳನ್ನು ದೂರೀಕರಿಸಬೇಕು. ಕವನಗಳಲ್ಲಿ ಒಳ್ಳೆಯ ವಿಡಂಬನಶಕ್ತಿಯಡಗಿದೆ; ವ್ಯಕ್ತಿ ವೈಶಿಷ್ಟ್ಯವಿದೆ; ಆಧುನಿಕತೆಯಿದೆ. 'ಬಿಸಾಟಿ'ಮೊದಲಾದ ಗ್ರಾಮ್ಯ ಪ್ರಯೋಗಗಳನ್ನು ಬಿಡಬೇಕು. ವೃದ್ಧಬುದ್ಧಿಯವರು ಈ ತರುಣನಾದರೂ ಪ್ರಬುದ್ಧ ಬುದ್ಧಿಯ ಕವಿಯ ಕೃತಿಗಳನ್ನು ತಾತ್ಕಾಲಿಕ ಸಾಹಿತ್ಯವೆಂದು ಹೀಗಳೆಯಬಹುದು; ಆದರೆ ಭಾವಗಂಭೀರ್ಯವಿದ್ದ ಯಾವ ಕೃತಿಗೇ ಅಗಲಿ ಚಿರಸ್ಥಾಯಿತ್ವವಿದೆ ಎಂದು ಅವರಿಗೆ ಉತ್ತರ ಹೇಳಬೇಕಾಗುತ್ತದೆ. ಇದಕ್ಕಾಗಿ ಕವಿಗೆ ಅಭಿನಂದನೆ.

## The Karnatak College Miscellany

ಧಾರವಾಡದ ಕರ್ನಾಟಕ ಕಾಲೇಜಿನ ಈ ಮಿಶ್ರ ಪತ್ರಿಕೆಯಲ್ಲಿ ೧೬ ಅಂಗ್ಲ ಲೇಖನಗಳೂ ೧೧ ಕನ್ನಡ ಬರಹಗಳೂ ೭ ಮರಾಠಿ, ೨ ಉರ್ದು, ೨ ಹಿಂದಿ, ೨ ಕೊಂಕಣಿ ಲೇಖನಗಳೂ ಇವೆ.

ಅಂಗ್ಲ ಲೇಖನಗಳಲ್ಲಿ ಪದ್ಯಗಳು ಚೆನ್ನಾಗಿವೆ. ಶ್ರೀ ಬೇಂದ್ರೆಯವರ ೭ ಕವನಗಳ ಅನುವಾದ ಶ್ಲಾಘ್ಯವಾಗಿದೆ. ಕನ್ನಡದ ಉತ್ತಮ ಕೃತಿಗಳ ಭಾಷಾಂತರ ಹೀಗೇ ಸಾಗಬೇಕಾದುದು ಅವಶ್ಯಕ. ಚೆಲುವು ಚಾರಿತ್ರ್ಯ, ಇಂದು ನಮಗೆ ಬೇಕಾಗಿರುವ ಸಾಹಿತ್ಯ, ಶಬರ ಶಂಕರವಿಳಾಸಂ ಎಂಬ ಕನ್ನಡ ಪ್ರಬಂಧಗಳೂ ಮಕರ ಸಕ್ರಾಂತಿ ಎಂಬ ಕನ್ನಡ ಕವನವೂ ಸೊಗಸಾಗಿವೆ. ಒಟ್ಟಿನ ಮೇಲೆ ವಿದ್ಯಾರ್ಥಿಗಳ ಉತ್ಸಾಹ ಸ್ತುತ್ಯವಾಗಿದೆಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

## Cultural History of Karnatak

(Ancient & Medical) by A. P. Karamarkar. M. A. LL. B. Ph. D. Published by Karnatak Vidya-Vardhak Sangh. Dharwar. Demy Octavo pp. 10+180. Price Rs. 5/-

ಕನ್ನಡ ನಾಡಿನ ಪ್ರಾಚೀನ ಇತಿಹಾಸ ಸಂಸ್ಕೃತಿ ಪರಂಪರೆ ಉಜ್ವಲವಾಗಿದ್ದರೂ ಆ ಬಗ್ಗೆ ಸಾಕಷ್ಟು ಗ್ರಂಥಗಳು, ಅದರಲ್ಲಿಯೂ ಪೂರ್ವಗ್ರಹ ದೂಷಿತರಾಗದೆ ಬರೆಯಲ್ಪಟ್ಟ ಗ್ರಂಥಗಳು ವಿರಳವಾಗಿ ಇದ್ದುದರಿಂದ ಅನೇಕರಿಗೆ ಕನ್ನಡ ನಾಡಿನ ಆ ಉಜ್ವಲ ಇತಿಹಾಸದ ಸಾಕಷ್ಟು ಪರಿಚಯವಾಗಿಲ್ಲೆಂದು ಹೇಳಬಹುದಾಗಿದೆ. ಇತ್ತೀಚೆ ಈ ಬಗ್ಗೆಪ್ರಯತ್ನಗಳು ನಡೆಯುತ್ತಿವೆ. ಅಂಥ ಪ್ರಯತ್ನಗಳ ಫಲವೆ ಪ್ರಸ್ತುತ ಪುಸ್ತಕವೆಂದು ಹೇಳಬಹುದು. ಶ್ರೀ ಅನಂತರಾವ ಕರಮರಕರರು ಭಾರತದ ಪ್ರಾಚೀನ ಇತಿಹಾಸ ಸಂಸ್ಕೃತಿಯನ್ನು ಆಳವಾಗಿ ಅಭ್ಯಾಸ ಮಾಡಿ ಅದರಲ್ಲಿ ಸಂಶೋಧನೆಯನ್ನು ನಡೆಸಿದವರು. ಭಾಂಡಾರಕರ ಸಂಶೋಧನ ಸಂಸ್ಥೆಯಲ್ಲಿದ್ದು ನಾಡಿನ ಉಜ್ವಲ ಇತಿಹಾಸದ ಸವಿಯನ್ನು ಸವಿದವರು. ಅದರಲ್ಲಿಯೂ ಕರ್ನಾಟಕದ ಪ್ರಾಚೀನ ಸಾಂಸ್ಕೃತಿಕ ಇತಿಹಾಸವನ್ನು ಭಾರತದ ಬಂಧವಿಮೋಚನೆಗಾಗಿ ಬ್ರಿಟಿಶಸರಕಾರದ ಅತಿಥಿಗಳೆಂದು ಕುರಂಗದಲ್ಲಿದ್ದಾಗ ಅಭ್ಯಸಿಸಿದವರು. ಇದೆಲ್ಲದರ ಫಲವಾಗಿ ಹೊರಬಿದ್ದ ಪುಸ್ತಕವು ಉಪಯುಕ್ತವಾಗಿದೆಯೆಂದು ಬೇರೆ ಹೇಳಬೇಕಿಲ್ಲ. ಕರ್ನಾಟಕದ ಪ್ರಾಚೀನ ಇತಿಹಾಸ ಸಂಸ್ಕೃತಿಯ ಮೇಲೆ ಪರಕೀಯರಿಂದ ಮಾಡಲ್ಪಟ್ಟ ಅತ್ಯಾಚಾರದ ಪರಿಮಾರ್ಜನೆ ಇಂಥ ಸಾಧಾರ ಗ್ರಂಥಗಳಿಂದ ಬಹಳ ಮಟ್ಟಿಗೆ ಆಗುವದೆಂದು ಹೇಳಿದರೆ ತಪ್ಪಾಗದು. ಕರ್ನಾಟಕದ ಕಲೆ, ಶಿಲ್ಪ, ನೀತಿಶಾಸ್ತ್ರ, ಅರ್ಥಶಾಸ್ತ್ರ, ಧರ್ಮ, ವೇದಾಂತ ಮತ್ತು ಸಾಂಸ್ಕೃತಿಕ ಮತ್ತು ಉಳಿದ ಅಂಗೋಪಾಂಗಗಳು ಅತ್ಯಂತ

— ೧೬ ನೇ ಪುಟಕ್ಕೆ




## ಚಿರಂಜೀವಿಗಳಾಗಲಿ

ಇದೇ ಅಕ್ಟೋಬರ ೨ ನೆಯ ತಾರೀಕಿಗೆ ಮಹಾತ್ಮಾಗಾಂಧಿಯವರಿಗೆ ೭೮ ವರುಷಗಳು ತುಂಬಿದವು. ಈ ಹುಟ್ಟುಹಬ್ಬವನ್ನು ಇಡೀ ಭಾರತವು ಅತ್ಯಂತ ಸಂಭ್ರಮದಿಂದ ವಿವಿಧ ಕಾರ್ಯಕ್ರಮಗಳನ್ನಿಟ್ಟುಕೊಂಡು ಆಚರಿಸಿದ್ದುಂಟು. ಮಹಾತ್ಮಾಗಾಂಧಿಯವರು ಈ ಶತಮಾನದ ಯುಗಪುರುಷರೆಂದು ಹೇಳಿದರೆ ತಪ್ಪಾಗದು. ಮಾನವರ ಕಷ್ಟನಿಷ್ಠುರಗಳನ್ನು, ದಾಸ್ಯವನ್ನು, ಅಸಮಾನತೆ ಅನ್ಯಾಯಗಳನ್ನು ಹರಿದೊಗೆಯಲು ವಿವಿಧ ಕಷ್ಟನಷ್ಟಗಳನ್ನು ಸಹಿಸಿದವರಲ್ಲಿ ಅಗ್ರಗಣ್ಯರು. ವಕೀಲಿಗೆಂದು ದಕ್ಷಿಣ ಆಫ್ರಿಕೆಗೆ ಹೋದಾಗ ಅಲ್ಲಿನ ಭಾರತೀಯರ ಮೇಲಾಗುತ್ತಿರುವ ಅನ್ಯಾಯ ಜುಲುಮೆಗಳನ್ನು ಸಹಿಸಲಾರದೆ ಸತ್ಯಾಗ್ರಹವನ್ನು ಹೂಡಿ ಯಶಸ್ವಿಯಾದವರು. ಅಂದಿನಿಂದ ಇಂದಿನವರೆಗೆ ಸಾರ್ವಜನಿಕರಿಗಾಗಿಯೆ ಅವರು ಕಷ್ಟವನ್ನು ಸಹಿಸುತ್ತಿರುವರು. ಆಫ್ರಿಕೆಯಿಂದ ಮರಳಿ ಬಂದ ಬಳಿಕ ಲೋಕಮಾನ್ಯರ ಮರಣದ ತರುವಾಯ ಭಾರತದ ಧುರೀಣತ್ವವನ್ನು ವಹಿಸಿ ಕಾಲಕಾಲಕ್ಕೆ ವಿವಿಧ ಚಳವಳಿಗಳನ್ನು ಹೂಡಿ ಭಾರತವನ್ನು ಇಂದು ಸ್ವತಂತ್ರ ಮಾಡಿದ ಸಾಹಸಿಗರು. ಭಾರತದ ಸ್ವಾತಂತ್ರ್ಯದ ಅಧಿದೇವತೆಯಂತಿರುವ ಗಾಂಧೀಜಿಯವರ ಈ ಹುಟ್ಟುಹಬ್ಬವನ್ನು ಸ್ವತಂತ್ರ ಭಾರತವಿಂದು ಬಹಳ ವಿಜೃಂಭಣೆಯಿಂದ ಆಚರಿಸುವದರಲ್ಲಿ ಸಂದೇಹವಿಲ್ಲ. ಆದರೆ ಬರಿ ಹುಟ್ಟು ಹಬ್ಬವನ್ನಾಚರಿಸಿದರೆ, ಅದಕ್ಕಾಗಿ ಲಕ್ಷಗಟ್ಟಲೆ ಹಣವನ್ನು ವೆಚ್ಚ ಮಾಡಿದರೂ ಗಾಂಧೀಜಿಯವರಿಗೆ ಸಂತೃಪ್ತಿಯಿಲ್ಲ. ಅವರು ಹಾಕಿಕೊಟ್ಟ ವಿಧಾಯಕ ಕಾರ್ಯಕ್ರಮವನ್ನು, ಕಲಿಸಿದ ಅಹಿಂಸಾ, ತ್ಯಾಗ, ಸೇವೆಯ ಪಾಠವನ್ನು ಸ್ಮರಿಸಿ ಆಚರಣೆಯಲ್ಲಿ ತಂದು ಯಶಸ್ವಿಗೊಳಿಸಿದರೆ ನಿಜವಾಗಿ ಅವರ ಹುಟ್ಟು ಹಬ್ಬವನ್ನು ಆಚರಿಸಿದಂತಾಗುವದು. ಭಾರತವಿಂದು ಸ್ವತಂತ್ರವಾಗಿದ್ದರೂ ದೇಶದಲ್ಲಿಯ ಈ ಅಶಾಂತ ಪರಿಸ್ಥಿತಿಯಿಂದ ಗಾಂಧೀಜಿಯವರು ಅತ್ಯಂತ ಉದ್ವಿಗ್ನರಾಗಿರುವರು. ಕಳೆದ ೩೭ ವರ್ಷಗಳಿಂದ ಭಾರತಕ್ಕೆ ಬೋಧಿಸಿದ ಅಹಿಂಸಾ ಮಂತ್ರದ ಪರಿಣಾಮ ಸ್ವಲ್ಪೂ ಆಗದಿದ್ದುದಕ್ಕಾಗಿ ಬಹಳ ಮಟ್ಟಿಗೆ ನೊಂದಿಕೊಂಡಿರುವರು. ಆದರಿಂದ ನೂರಿಪ್ಪತ್ತೈದು ವರುಷ ಬಾಳಬೇಕೆಂಬ ಅವರ ನಿರ್ಧಾರಕ್ಕೂ ವ್ಯತ್ಯಯವುಂಟಾಗಿದೆ. ಇನ್ನು ಮುಂದೆ ಬಹಳದಿನ ಬಾಳುವುದರಲ್ಲಿ ಅರ್ಥವಿಲ್ಲೆಂದೂ ಅವರು ಅಭಿಪ್ರಾಯ ಪಡಹತ್ತಿರುವರು. ಗಾಂಧೀಜಿಯಂಥ ವಿಭೂತಿ ಪುರುಷರು ಚಿರಕಾಲ ಬಾಳಿ ದೇಶಕ್ಕೆ ವಿವಿಧ ರೀತಿಯಿಂದ ಸೇವೆ ಸಲ್ಲಿಸುವದು ಅವಶ್ಯವಾಗಿದೆ. ಆದುದರಿಂದ ಭಾರತೀಯರು ಸದ್ಯದ ಹತ್ಯಾಕಾಂಡವನ್ನು ಬಿಟ್ಟುಗೊಟ್ಟು ಮಹಾತ್ಮರು ಚಿರಂಜೀವಿಗಳಾಗುವಂತೆ ನೋಡಿಕೊಳ್ಳಬೇಕು. ಜಗಚ್ಚಾಲಕನು ಆ ಬಗೆಯ ಸದ್ಬುದ್ಧಿಯನ್ನು ಅವರಿಗೆ ಈಯಲಿ, ಮತ್ತು ಮಹಾತ್ಮರು ಚಿರಂಜೀವಿಯಾಗುವಂತೆ ಅನುಗ್ರಹಿಸಲಿ.

## ಅಶಾಂತಿ ಅಳಿಯುವುದೆಂತು ?

ಮುಸ್ಲಿಂ ಲೀಗಿನ ಧುರೀಣರು ಒಳ್ಳೆ ಛಲದಿಂದ ದೇಶದ ವಿಭಜನೆಯಿಂದಲೆ ಮುಸಲ್ಮಾನರಿಗೆ ಮೋಕ್ಷವೆಂದು ಪ್ರತಿಪಾದಿಸಿ ಪಾಕಿಸ್ತಾನವನ್ನು ಪಡೆದದ್ದಾಯಿತು. ಪಾಕಿಸ್ತಾನವನ್ನು ಕೊಡದಿದ್ದರೆ ದೇಶದ ಪರಿಸ್ಥಿತಿ ಶಾಂತವಾಗದೆಂದು ಹೆದರಿಸಿದ್ದೂ ಆಯಿತು. ಬ್ರಿಟಿಶ ಸರಕಾರದ ಮನಸ್ಸನ್ನು ಅರೀತಿ ಸಿದ್ಧಗೊಳಿಸಿದ್ದೂ ಆಯಿತು. ಬ್ರಿಟಿಶರು ಹೊರಟಿದ್ದು ಹೋಗುವಾಗ ದೇಶವನ್ನು ಒಡೆದು ಒಂದು ಬಗೆಯಿಂದ ಅಶಾಂತಿ, ಅನೈಕ್ಯಗಳಿಗೆ ಶಾಶ್ವತವಾದ ಕಾರಣವನ್ನುಂಟು ಮಾಡಿ ಹೊರಟಿದ್ದು ಹೋದರು. ಮಹಾತ್ಮಾಗಾಂಧಿ ಮೊದಲಾದವರು ಎಷ್ಟೊಂದು ವಿರೋಧಿಸಿದರೂ ಕೇಳಲಿಲ್ಲ. ಈಗ ಅದರ ಕಹಿ ಫಲಗಳನ್ನು ಅನುಭವಿಸಬೇಕಾಗಿದೆ. ಪಾಕಿಸ್ತಾನವನ್ನು ಪಡೆಯುವಾಗ ಮುಸಲ್ಮಾನರ ಮನಸ್ಸಿನಲ್ಲಿ ಬಿತ್ತಿದ ದ್ವೇಷಾಗ್ನಿಯು ಇಂದಿಗೂ ಆರಲೊಲ್ಲದು. ಅದು ಮತ್ತಷ್ಟು ಪ್ರಜ್ವಲವಾಗಹತ್ತಿದೆ. ಅದರ ಜ್ವಾಲೆಯಿಂದ ಲಕ್ಷಗಟ್ಲೆ ಜನ ಭಸ್ಮವಾಗಹತ್ತಿದೆ. ಬಗೆ ಬಗೆಯ ಕಷ್ಟ ನಿಷ್ಠುರಗಳಿಗೆ ಅದು ಆಹುತಿಯಾಗಬೇಕಾಗಿ ಬಂದಿದೆ. ಶಾಂತಿ ಪ್ರಸ್ಥಾಪನೆಗಾಗಿ ಎರಡೂ ಸರಕಾರಗಳು ಎಷ್ಟೊಂದು ಪ್ರಯತ್ನಿಸಿದರೂ ಸಾಧ್ಯವಾಗಲೊಲ್ಲದು. ಶಾಂತತಾ ಭಂಗಕ್ಕೆ ಕಾರಣರಾದವರು ರಾಷ್ಟ್ರದ್ರೋಹಿಗಳೆಂದು ಬಗೆದು ಅರೀತಿ ಉಗ್ರಕ್ರಮವನ್ನು ತೆಗೆದುಕೊಳ್ಳಲಾಗುವುದೆಂದು ಭಾರತದ ಮುಖ್ಯ ಮಂತ್ರಿಗಳು ಘೋಷಿಸಿದ್ದಾರೆ. ಪಾಕಿಸ್ತಾನ ಸರಕಾರದವರೂ ಬಾಯಿಂದ ಶಾಂತಿ ಮಂತ್ರವನ್ನು ಬೀರುತ್ತಾರೆ. ಆದರೆ ಹಾಗೆ ಮಾಡುವಾಗಲೆ ಅಜ್ಞ ಜನರಲ್ಲಿ ದ್ವೇಷ ಹುಟ್ಟುವಂಥ ಮಾತುಗಳನ್ನು ಹೇಳುವುದರಿಂದ ಅದರ ಪರಿಣಾಮ ವಿಪರೀತವಾಗಹತ್ತಿದೆ. ದೇಶದಲ್ಲಿ ಇನ್ನೂ ಶಾಂತಿ ಪ್ರಸ್ಥಾಪಿತವಾಗಲೊಲ್ಲದು. ಪರದೇಶಗಳ ಅಪಹಾಸಕ್ಕೆ ಭಾರತವಿಂದು ಗುರಿಯಾಗಬೇಕಾಗಿದೆ. ಈ ದುಃಸ್ಥಿತಿ ದೂರಾಗಬೇಕಾದರೆ ಎರಡೂ ಸರಕಾರಗಳಷ್ಟೇ ಅಲ್ಲ ಆಯಾ ಜಾತೀಯ ಧುರೀಣರೂ ಮನಸಾ ಪ್ರಯತ್ನಿಸಬೇಕು– ಉದ್ವೇಗಕರವಾದ ಮಾತು ಮತ್ತು ಕೃತ್ಯಗಳನ್ನು ಸಂಪೂರ್ಣವಾಗಿ ಬಿಟ್ಟುಗೊಡಬೇಕು; ಅಂದರೇನೆ ಉದ್ದಿಷ್ಟ ಸಾಧ್ಯವಾಗಬಲ್ಲದು.

## ಮಾತು ಕೃತಿಯಲ್ಲಿಳಿಯಲಿ

ಹಿಂದುಸ್ತಾನದಲ್ಲಿರುವ ಮುಸಲ್ಮಾನರು ಹಿಂದುಸ್ತಾನಕ್ಕೇ ನಿಷ್ಠರಾಗಿರತಕ್ಕದ್ದೆಂಬುದನ್ನು ಬೇರೆ ಹೇಳಬೇಕಿಲ್ಲ. ಆದರೆ ಪಾಕಿಸ್ತಾನವನ್ನು ಪಡೆಯುವಾಗ ಮುಸ್ಲಿಂಲೀಗಿನವರು ಹಿಂದು ಮುಸಲ್ಮಾನರು ಎರಡು ಪ್ರತ್ಯೇಕ ಜನಾಂಗವೆಂದು ಪ್ರತಿಪಾದಿಸಿ ಮುಸಲ್ಮಾನರಲ್ಲಿ ಆ ಬಗೆಯ ದ್ವೇಷಭಾವನೆಯನ್ನು ತುಂಬಿ ಬಿಟ್ಟಿದ್ದರಿಂದ ಹಿಂದುಸ್ತಾನವಿಂದು ಸ್ವತಂತ್ರವಾದರೂ ಆ ರಾಷ್ಟ್ರಕ್ಕೆ ವಿಧೇಯರಾಗಿರಬೇಕಾದ ತಮ್ಮ ಕರ್ತವ್ಯವನ್ನು ಅನೇಕ ಮುಸಲ್ಮಾನರು ಇನ್ನೂ ಮಾಡದಾಗದವರಾಗಿದ್ದಾರೆ ಅಂತೆಯೆ ಅಲ್ಲಲ್ಲಿನ ಮುಸ್ಲಿಂಲೀಗ ಧುರೀಣರು ಆ ಕರ್ತವ್ಯದ ಅರಿವನ್ನು ತಮ್ಮ ಅನುಯಾಯಿಗಳಿಗೆ ಮಾಡಿಕೊಡಹತ್ತಿರುವರು. ಅಗಷ್ಟ ೧೫ ರ ಸ್ವಾತಂತ್ರ್ಯೋತ್ಸವದಲ್ಲಿ ಮುಸ್ಲಿಂಲೀಗಿನವರು ಪಾತ್ರವಹಿಸಿದ ರೀತಿ ಅಂದಿನಿಂದ ಇಂದಿನವರೆಗಿನ ಅವರ ಆಚರಣೆ ನಿರ್ದುಷ್ಟವಾಗಿರುವುದಿಲ್ಲ. ಆದರೂ ಇತ್ತೀಚೆ ಮುಸ್ಲಿಂಲೀಗ ಧುರೀಣರಿಗೆ ಸೆದ್ಬುದ್ಧಿಯುಂಟಾಗಹತ್ತಿದೆ. ಓಡಿಸಾ ಶಾಸನಸಭೆಯ ಮುಸ್ಲಿಂಲೀಗ ಪಕ್ಷದ ಧುರೀಣರಾದ ಲತೀಫ ರಹಿಮಾನರು ಪ್ರಕಟನೆಯೊಂದನ್ನು ಹೊರಡಿಸಿ ಪಾಕಿಸ್ತಾನ ಚಳವಳಿಗೆ ಬೆಂಬಲ ಕೊಟ್ಟದ್ದು ಪ್ರಮಾದವಾಯಿತು. ಸದ್ಯದ ಅಶಾಂತಿಗೆ ಅದೇ ಕಾರಣವೆಂದು ಒಪ್ಪಿ ದ್ವಿರಾಷ್ಟ್ರ ತತ್ವವನ್ನು ಬಿಟ್ಟುಗೊಟ್ಟು ಮುಸಲ್ಮಾನರೆಲ್ಲ ಭಾರತಕ್ಕೆ ವಿಧೇಯರಾಗಿರತಕ್ಕದ್ದೆಂದು ಪ್ರತಿಪಾದಿಸಿದ್ದಾರೆ ಅದೇ ರೀತಿ ಮುಂಬಯಿಯಲ್ಲಿಯ ಮುಸ್ಲಿಂಲೀಗ ಪತ್ರಿಕೆಗಳು ಅಭಿಪ್ರಾಯಪಟ್ಟಿರುವವು. ಆದರೆ ಬರಿ ಪ್ರಕಟನೆ ಹೊರಡಿಸುವುದರಿಂದ ಇಲ್ಲವೆ ಅಭಿಪ್ರಾಯ ವ್ಯಕ್ತ ಮಾಡುವದರಿಂದ ಉದ್ದಿಷ್ಟ ಸಾಧಿಸದು. ಈ ಮಾತು ಕೃತಿಯಲ್ಲಿ ಇಳಿಯಬೇಕು. ಮುಸ್ಲಿಂಲೀಗ ಧುರೀಣರು ದೇಶದಲ್ಲೆಲ್ಲ ಸಂಚರಿಸಿ ಈ ಬಗ್ಗೆ ಪ್ರಚಾರ ಮಾಡಬೇಕು. ಪಾಕಿಸ್ತಾನವನ್ನು ಪಡೆಯುವ ಕಾಲಕ್ಕೆ ಬಿತ್ತಲ್ಪಟ್ಟ ದ್ವೇಷ ಬೀಜಗಳನ್ನು ಸಮೂಲ ನಾಶಗೊಳಿಸಬೇಕು. ಒಳಗೊಂದು ಹೊರಗೊಂದು ಧೋರಣವನ್ನು ಬಿಟ್ಟುಗೊಡಬೇಕು. ಭಾರರದಲ್ಲಿಯೆ ನಾವಿಂದು ಇರತಕ್ಕವರು, ಭಾರತ ಸರಕಾರದಿಂದಲೆ ತಮ್ಮ ಉದ್ಧಾರ, ಅದಕ್ಕೇ ವಿಧೇಯರಾಗಿರತಕ್ಕದ್ದು ಕರ್ತವ್ಯ ಎಂಬುದನ್ನು ತಿಳಿದುಕೊಂಡು ಮುಸಲ್ಮಾನರು ಆಚರಿಸತಕ್ಕದ್ದು. ಈ ಬಗೆಯ ವಿಚಾರ ಯಾರಿಗೆ ಒಗ್ಗುವುದಿಲ್ಲವೊ ಅವರು ನೇರವಾಗಿ ಪಾಕಿಸ್ತಾನಕ್ಕೇ ಪ್ರಯಾಣ ಬೆಳಸಬೇಕು. ಭಾರತದಲ್ಲಿಇದ್ದುಕೊಂಡು ಭಾರತಕ್ಕೇ ದ್ರೋಹ ಬಗೆಯುವುದು ಮಹದಪರಾಧವು. ಈ ಮಾತನ್ನು ಮುಸಲ್ಮಾನ ಸಾರ್ವಜನಿಕರು ಮತ್ತು ಅಧಿಕಾರಿಗಳು ಹಾಗು ಇತರರು ಚೆನ್ನಾಗಿ ನೆನೆದುಕೊಂಡು ಅದರಂತೆ ಆಚರಿಸಬೇಕು. ಮುಸ್ಲಿಂಲೀಗಿನವರಿಗೆ ಹೇಳಿದ ಈ ಮಾತು ಪಾಕಿಸ್ತಾನದಲ್ಲಿರುವ ಮುಸಲ್ಮಾನೇತರರಿಗೂ ಅನ್ವಯಿಸುವುದೆಂದು ಬೇರೆ ಹೇಳಬೇಕಿಲ್ಲ.

## ಚರ್ಚಿಲ್ಲರ ದುಡುಕು

ಬ್ರಿಟನದ ಹಿಂದಿನ ಮುಖ್ಯ ಮಂತ್ರಿಗಳೂ ಕಾನ್ಸರ್ವೇಟಿವ್ ಪಕ್ಷದ ಅಗ್ರಣಿಗಳೂ ಆಗಿರುವ ಚರ್ಚಿಲ್ಲರು ಭಾರತದ ಇಂದಿನ ಅಶಾಂತ ಪರಿಸ್ಥಿತಿಯನ್ನು ನೋಡಿ ಅಪಹಾಸ ಮಾಡಿದ್ದಾರೆ. ಭಾರತದಲ್ಲಿ ಇನ್ನೂ ಹೆಚ್ಚಿನ ದುರಂತಗಳು ನಡೆಯುವವೆಂದೂ ಬ್ರಿಟಿಶರಾಳಿಕೆಯಲ್ಲಿ ಭಾರತ ಶಾಂತವಾಗಿದ್ದಿತೆಂದೂ ಹೇಳಿ ಹಿಂದುಸ್ತಾನ ಸ್ವತಂತ್ರವಾದುದು ಅನಿಷ್ಟಕ್ಕೇ ಕಾರಣವಾಯಿತೆಂದು ಅಭಿಪ್ರಾಯ ಪಟ್ಟಿದ್ದಾರೆ. ರಾಜ್ಯಕ್ರಾಂತಿಯಾಗುವಾಗ ಕೆಲದಿನ ಯಾವ ದೇಶದಲ್ಲಿಯಾದರೂ ಶಾಂತ ಪರಿಸ್ಥಿತಿಯುಳಿಯುವದು ಸ್ವಲ್ಪ ಕಷ್ಟ. ಅದರಲ್ಲಿಯೂ ಬ್ರಿಟಿಶರಂಥ ಕಕುನಿತಂತ್ರದವರು ಬಿತ್ತಿದ ದ್ವೇಷಾಗ್ನಿಯ ಫಲವೇ ಸದ್ಯದ ಅಶಾಂತಿಗೆ ಕಾರಣವೆಂಬುದನ್ನು ಯಾರೂ ಮರೆಯರು. ತಾವು ಬಿತ್ತಿದ ಅಶಾಂತಿಯ ಬೀಜದ ಪರಿಣಾಮವೆ ಇದೆಂಬುದನ್ನು ಮರೆತು ಚರ್ಚಿಲ್ಲರು ಹಿಂದುಸ್ತಾನದ ಮೇಲಿಯೇ ತಪ್ಪು ಹೊರಿಸಿ ಸದಾಕಾಲ ಬ್ರಿಟಿಶರ ಆಳಿಕೆಯಲ್ಲಿ ಅದು ಇರಬೇಕಾಗಿತ್ತೆಂಬಾಶಯವನ್ನು ವ್ಯಕ್ತಪಡಿಸಿದ್ದು ಅವರಿಗೆ ಶೋಭಿಸದು. ಬ್ರಿಟಿಶರಾಳಿಕೆಯಲ್ಲಾದರೊ ಯಾವ ಬಗೆಯ ಶಾಂತಿ ಇದ್ದಿತು? ಅದು ಕೇವಲ ಸ್ಮಶಾನ ಶಾಂತಿಯೆ ಎಂದು ಬೇರೆ ಹೇಳಬೇಕಿಲ್ಲ. ಮಹಾತ್ಮಾಗಾಂಧಿಯವರು ಚರ್ಚಿಲ್ಲರ ಈ ದುಡುಕಿಗೆ ತಕ್ಕ ಉತ್ತರವನ್ನು ಕೊಟ್ಟಿದ್ದಾರೆ. ಕೋಟ್ಯವಧಿ ಜನರಿರುವ ಭಾರತದಲ್ಲಿ ಕೆಲ ಲಕ್ಷ ಜನರು ಅಜ್ಞಾನದಿಂದ ಅಶಾಂತಿಗೆಳಿಸಿದರೆ ಭಾರತ ಸ್ವತಂತ್ರವಾದುದು ತಪ್ಪಾಯಿತೆಂದು ಭಾವಿಸುವದಾಗಲಿ, ಇನ್ನೂ ಹೆಚ್ಚಿನ ದುರಂತ ಭಾರತದಲ್ಲಿ ಸಂಭವಿಸಲಿದೆಯೆಂದು ಭವಿಷ್ಯ ನುಡಿಯುವದಾಗಲಿ ಚರ್ಚಿಲ್ಲರ ಅಗಾಧ ಅಜ್ಞಾನವನ್ನೇ ನಿದರ್ಶಿಸುತ್ತದೆ. ನಾವು ಮೇಲೆ ಹೇಳಿದಂತೆ ಭಾರತವನ್ನು ವಿಭಾಗಿಸಿ ಬ್ರಿಟಿಶರೆ ಅಂತರ್‌ಯುದ್ಧದ ಬೇಗೆಯನ್ನು ಹಬ್ಬಿಸಿರುವರೆಂಬುದು ಸರ್ವಶ್ರುತ. ಈ ಪರಿಸ್ಥಿತಿಯಲ್ಲಿ ಚರ್ಚಿಲ್ಲರಂಥ ಬ್ರಿಟನದ ಧುರೀಣರು ಹಿಂದುಸ್ತಾನದಲ್ಲಿಯ ಹತ್ಯಾಕಾಂಡವನ್ನು ನಿಷೇಧಿಸಿ ಶಾಂತತೆಯಿಂದ ಆಡಳಿತ ಸಾಗಿಸಬೇಕೆಂದು ಹಿಂದೀಯರಿಗೆ ಹೇಳಬೇಕಲ್ಲದೆ ಹಿಂದುಸ್ತಾನ ಸ್ವತಂತ್ರವಾದುದು ತಪ್ಪು, ಇನ್ನೂ ಹೆಚ್ಚಿನ ದುರಂತ ಸಂಭವಿಸುವುವು ಮುಂತಾಗಿ ಉದ್ರಿಕ್ತ ಮಾತುಗಳನ್ನಾಡುವದು ಪುರುಷಾರ್ಥವಲ್ಲ. ಚರ್ಚಿಲ್ಲರಂಥವರು ಇದನ್ನು ತಿಳಿದುಕೊಳ್ಳಬೇಕಾದುದು ಅವಶ್ಯವಾಗಿದೆ.

## ಜುನಾಗಡದ ಸಮಸ್ಯೆ

ಪ್ರಜೆಗಳ ಒಪ್ಪಿಗೆಯನ್ನು ಪಡೆಯದೆ ಕಾಠೇವಾಡದಲ್ಲಿಯ ಜುನಾಗಡ ಸಂಸ್ಥಾನವು ಪಾಕಿಸ್ತಾನದಲ್ಲಿ ಸೇರಿದ್ದರಿಂದ ಭರತಖಂಡದಲ್ಲಿಯೆ ಮಹತ್ವದ ಸಮಸ್ಯೆ ಉದ್ಭೂತವಾಗಿದೆ. ಅಲ್ಲಿನ ಬಹುಸಂಖ್ಯ ಪ್ರಜೆಗಳು ಹಿಂದುಗಳಾಗಿದ್ದು ಅರಸರು ಮುಸಲ್ಮಾನರಾಗಿರುವರು. ಅವರು ಪ್ರಜೆಗಳ ಸಮ್ಮತಿಯನ್ನು ಕೇಳದೆ ಒಮ್ಮೆಲೆ ಧುಡುಂ ಪ್ರವೇಶ ಮಾಡಿ ಪಾಕಿಸ್ತಾನದಲ್ಲಿ ಸೇರಿಬಿಟ್ಟರು. ಅದಾವ ಧೈರ್ಯದಿಂದ ಅವರು ಹೀಗೆ ಮಾಡಿದರೊ ತಿಳಿಯದು? ಸುತ್ತಲೂ ಹಿಂದೀ ಒಕ್ಕೂಟಕ್ಕೆ ಸೇರಿದ ಸಂಸ್ಥಾನಗಳಿರುವಾಗ ಮಧ್ಯದಲ್ಲಿಯ ಜುನಾಗಡ ಸಂಸ್ಥಾನವೊಂದು ಪಾಕಿಸ್ತಾನದಲ್ಲಿ ಸೇರಿದರೆ ಬಗೆ ಬಗೆಯ ತೊಡಕುಗಳು ಉಪಸ್ಥಿತವಾಗುವದು ಸ್ವಾಭಾವಿಕ. ಅಂತೆಯೆ ಪ್ರಜೆಗಳು ಸ್ವತಂತ್ರ ಸರಕಾರವನ್ನು ಸ್ಥಾಪಿಸಿಕೊಂಡು ಆಡಳಿತವನ್ನು ಸಾಗಿಸಲಣಿಯಾಗಿದ್ದಾರೆ. ಸರಕಾರಿ ಬಂಗಲೆಯ ಆಕ್ರಮಣ ಮಾಡಿ ಪ್ರಜಾರಾಜ್ಯದವರು ತಮ್ಮ ಪ್ರಥಮ ಅಧಿಯೋಗವನ್ನು ಪ್ರಾರಂಭಿಸಿರುವರು. ಜುನಾಗಡ ನವಾಬರು ಪಾಕಿಸ್ತಾನ ಸರಕಾರದ ಆಶ್ರಯದ ವಿಶೇಷತಃ ಸೈನಿಕ ಆಶ್ರಯದ ಅಪೇಕ್ಷೆಯನ್ನು ಮಾಡದೆ ಪ್ರಜೆಗಳೊಡನೆಯೆ ಒಡಂಬಡಿಕೆ ಮಾಡಿಕೊಳ್ಳುವದು ಶ್ರೇಯಸ್ಕರವು. ಯಾವದೇ ಕಾರಣದಿಂದ ಪಾಕಿಸ್ತಾನದ ನೆರವನ್ನು ಕೋರಿದ್ದಾದರೆ ಹೆಚ್ಚಿನ ತೊಡಕುಗಳು ಉಪಸ್ಥಿತವಾಗಬಲ್ಲುವು. ಪಾಕಿಸ್ತಾನ ಸರಕಾರದವರೂ ಜುನಾಗಡ ಪ್ರಜೆಗಳ ಚಳವಳಿಯನ್ನು ಹತ್ತಿಕ್ಕಲು ನವಾಬರಿಗೆ ಸಹಾಯ ಸಲ್ಲಿಸುವ ಹೊಣೆಯನ್ನು ಹೊರುವ ಮೊದಲು ಗಂಭೀರವಾಗಿ ವಿಚಾರಿಸಿ ಸೂಕ್ತವಾದ ಧೋರಣವನ್ನೆ ವಹಿಸಬೇಕು. ದುಡುಕಿ ಏನಾದರೂ ಕ್ರಮವನ್ನು ತಕ್ಕೊಂಡರೆ ಅನವಶ್ಯಕ ತಿಕ್ಕಾಟವದ್ದು ಭಾರತ ಮತ್ತು ಪಾಕಿಸ್ತಾನಗಳೆರಡರಲ್ಲಿಯೂ ಈಗಿನಕ್ಕಿಂತ ಹೆಚ್ಚು ಅಶಾಂತ ಪರಿಸ್ಥಿತಿಯುಂಟಾಗುವದೆಂದು ಬೇರೆ ಹೇಳಬೇಕಿಲ್ಲ.

## ಅನುಕರಣೀಯ

ಸ್ವತಂತ್ರ ಭಾರತ ಸರಕಾರ ಮತ್ತು ನರೇಂದ್ರರಲ್ಲಿ ರಾಜ್ಯಾಧಿಕಾರದ ಬಗ್ಗೆ ಒಂದು ಬಗೆಯ ತೊಡಕು ಉಂಟಾಗುವಂತೆ ಬ್ರಿಟಿಶರು ಯೋಜಿಸಿದ್ದರೂ ಸಂಸ್ಥಾನಿಕರು ಪರಿಸ್ಥಿತಿಯನ್ನು ತಿಳಿದುಕೊಂಡು ಭಾರತಕ್ಕೆ ವಿಧೇಯರಾಗಿರತಕ್ಕದ್ದೇ ಕರ್ತವ್ಯವೆಂದು ಭಾವಿಸಹತ್ತಿರುವದು ಶುಭ ಸೂಚನೆಯು. ಪರಿಷ್ಕಾಧಿಕಾರ ತಮಗೆ ಸೇರಿದ್ದಲ್ಲ. ಅದು ಪ್ರಜೆಗಳ ಸೊತ್ತು ಎಂಬ ಭಾವವೆಯೂ ಅವರಲ್ಲಿ ಬಲಿಯುಹತ್ತಿದೆ. ಇದರಲ್ಲಿ ನಮ್ಮ ಕನ್ನಡ ಸಂಸ್ಥಾನವಾದ ಜಮುಖಂಡಿಯೂ ಅನುಕರಣೀಯ ಧೋರಣವನ್ನಿಟ್ಟುಕೊಂಡದ್ದು ಅಭಿಮಾನದ ಸಂಗತಿಯಾಗಿದೆ. ಜಮುಖಂಡಿಯ ತರುಣ ರಾಜೇಸಾಹೇಬರು ತಮ್ಮ ಧೋರಣವನ್ನು ಸ್ಪಷ್ಟಪಡಿಸುವ ಭಾಷಣವನ್ನು ಶಾಸನ ಸಭೆಯಲ್ಲಿ ಮಾಡಿ ಎರಡನೆಯವರಿಗೆ ಮಾರ್ಗ ಹಾಕಿ ಕೊಟ್ಟಿದ್ದಾರೆ. ಪರಿಷ್ಕಾಧಿಕಾರ ಪ್ರಜೆಗಳಿಗೇ ಸೇರಿದ್ದೆಂಬುದನ್ನು ಒಪ್ಪಿಕೊಂಡಿದ್ದಾರೆ. ಭಾರತ ಒಕ್ಕೂಟ ಸರಕಾರಕ್ಕೆ ತಾವು ವಿಧೇಯರಾಗಿ ನಡೆದುಕೊಳ್ಳುವದಾಗಿ ಸಾರಿದ್ದಾರೆ. ಪ್ರಜಾಪ್ರಭುತ್ವವೆ ಇಂದು ಯಶಸ್ವಿಯಾಗತಕ್ಕ ಆಡಳಿತ ಪದ್ಧತಿ ಎಂದು ಒಪ್ಪಿ ಅದನ್ನು ಆಚರಣೆಯಲ್ಲಿ ತರಲು ಮುಂದಾಗಿದ್ದಾರೆ. ಪ್ರಜಾ ಪ್ರತಿನಿಧಿಗಳು ಸಿದ್ಧಪಡಿಸಿದ ರಾಜ್ಯಘಟನೆಯನ್ನು ಬಳಕೆಯಲ್ಲಿ ತರಲು ಅಪ್ಪಣೆ ಸಿಸಿದ್ದಾರೆ. ತಮ್ಮ ಖಾಸಗಿ ವೆಚ್ಚವನ್ನು ನೂರಕ್ಕೆ ೧೦ ರಷ್ಟು ಮಾತ್ರ ಎಂದು ಗೊತ್ತುಪಡಿಸಿ ಲೋಕೋಪಯೋಗಿ ಕಾರ್ಯಗಳಿಗೆ ಹೆಚ್ಚಿನ ಹಣವನ್ನು ಮೀಸಲಾಗಿರಿಸಿದ್ದಾರೆ. ನರೇಂದ್ರರ ಖಾಸಗಿ ವೆಚ್ಚ ಈ ವರೆಗೆ ಕಾಯ್ದಿಟ್ಟ ವಿಷಯವೆ ಇತ್ತು. ಹೀಗಿದ್ದರೂ ಜಮುಖಂಡಿ ರಾಜೇಸಾಹೇಬರು ಅವನ್ನು ನಿರ್ದಿಷ್ಟಪಡಿಸಿಕೆಂಡಿರುವರು. ಹರಿಜನೋದ್ಧಾರ ಕಾರ್ಯದಲ್ಲಿ ನಿರತರಾಗಿರುವರು. ಸಾರ್ವಜನಿಕ ದೇವಾಲಯಗಳನ್ನು ಮುಕ್ತದ್ವಾರ ಮಾಡಿರುವರಲ್ಲದೆ ಅವರ ಶಿಕ್ಷಣ ಮುಂತಾದ್ದರಲ್ಲಿಯೂ ಹೆಚ್ಚಿನ ಆಸ್ಥೆ ವಹಿಸುವದಾಗಿ ಸಾರಿದ್ದಾರೆ. ಇದಲ್ಲದೆ ಭಾಷಾನ್ವಯ ಪ್ರಾಂತ ರಚನೆಯಾದಾಗ ಜಮುಖಂಡಿಯು ಕರ್ನಾಟಕಕ್ಕೆ ಸೇರುವದಾಗಿ ಸಾರಿದ್ದಾರೆ. ರಾಜೇಸಾಹೇಬರು ತಮ್ಮ ಪ್ರಗತಿಪರವಾದ ಈ ವಿಚಾರಗಳಿಗೆ ಅಭಿನಂದನಾರ್ಹರಾಗಿರುವರು. ಉಳಿದ ಸಂಸ್ಥಾನಿಕರಾದರೂ ಇವರ ಅನುಕರಣ ಮಾಡಿ ಪ್ರಜೆಗಳಿಗೆ ಹೊಣೆಗಾರ ಸರಕಾರವನ್ನು ದಯಪಾಲಿಸಿ ಸಂಸ್ಥಾನ ಪ್ರಜೆಗಳ ಮತ್ತು ತಮ್ಮ ಪ್ರಗತಿಯನ್ನು ಸಾಧಿಸಲಿ.

## ಇನ್ನಷ್ಟು ಔದಾರ್ಯ ತೋರಿಸಲಿ

ಮೈಸೂರು ಸರಕಾರದವರು ಸತ್ಯಾಗ್ರಹ ಸುದ್ದಿಗಳ ಪೂರ್ವಪರಿಶೀಲನೆಯ ಆಜ್ಞೆಯನ್ನು ರದ್ದುಪಡಿಸಿ ಸತ್ಯಾಗ್ರಹ ಸುದ್ದಿ ಪ್ರಕಟನೆಯ ವಿಚಾರವನ್ನು ಪತ್ರಿಕಾ ಸಂಪಾದಕರಿಗೇ ಬಿಟ್ಟುಗೊಟ್ಟದ್ದರಿಂದ ಮೈಸೂರು ಸಂಸ್ಥಾನದಲ್ಲಿಯ ಪತ್ರಿಕೆಗಳು ಮತ್ತೆ ಹೊರಡಹತ್ತಿದ್ದು ಸಂತೋಷದ ಸಂಗತಿಯು. ಪತ್ರಿಕಾ ಸಂಪಾದಕರು ತಮ್ಮಲ್ಲಿಯೆ ಒಂದು ಸಲಹೆ ಸಮಿತಿಯನ್ನು ಮಾಡಿಕೊಂಡು ಯಾವಾವ ಸುದ್ದಿಗಳನ್ನು ಎಂತು ಪ್ರಕಟಿಸಬೇಕೆಂಬ ಹೊಣೆಯನ್ನು ಅದಕ್ಕೆ ಒಪ್ಪಿಸಿ ಕೊಟ್ಟಿದ್ದಾರೆ. ಮುಂಬಯಿ ಪ್ರಾಂತದಲ್ಲಿ ಸರಕಾರ ಮತ್ತು ಪತ್ರಿಕಾ ಸಂಪಾದಕರಲ್ಲಿ ಈ ಬಗೆಯ ಒಡಂಬಡಿಕೆಯಾಗಿದ್ದು ಯಶಸ್ವಿಯಾಗಿ ಕಾರ್ಯ ಸಾಗಿದೆ. ಯಾವದೇ ಸಂಪಾದಕನು ತಿಳಿಯದೆಯೊ ಅಥವಾ ತಿಳಿದೊ ಈ ಕರಾರನ್ನು ಮುರಿದರೆ ಅವನಿಗೆ ತಿಳಿವಳಿಕೆಯನ್ನು ಮಾಡಿ ಕೊಡಲಾಗುತ್ತದೆ. ಮೈಸೂರ ಸರಕಾರದವರೂ ಈ ಮಾರ್ಗವನ್ನು ಅನುಸರಿಸಿದ್ದು ಅಭಿನಂದನೀಯವಾಗಿದೆ. ಪತ್ರಿಕಾ ಸಂಪಾದಕರಾದರೂ ತಮ್ಮ ಹೊಣೆಯನ್ನರಿತುಕೊಂಡು ಸುದ್ದಿಗಳನ್ನು ಪ್ರಕಟಿಸುವ ಧೋರಣವನ್ನು ವಹಿಸುತ್ತಿರುವರು ವಹಿಸಬೇಕು. ಯಾವದೇ ಬಗೆಯ ಉದ್ವೇಗಜನಕ ಅಥವಾ ಜಾತಿ ಜಾತಿಗಳಲ್ಲಿ ವೈಮನಸ್ಯವನ್ನು ಹುಟ್ಟಿಸುವ ಸುದ್ದಿಗಳಿಗೆ ಎಡೆ ಕೊಡಬಾರದು. ಸರಕಾರದವರು ಈ ಬಗೆಯ ಸ್ತುತ್ಯ ಉಪಕ್ರಮವನ್ನು ಕೈಕೊಂಡಿದ್ದು ಪ್ರಶಂಸಾರ್ಹವಾಗಿದೆ. ಮೈಸೂರ ಸರಕಾರದವರು ಪತ್ರಿಕಾಕರ್ತರ ಹೊಣೆಗೆ ಇನ್ನಷ್ಟು ಗೌರವಕೊಟ್ಟು ಸಂಸ್ಥಾನದಲ್ಲಿ ಪ್ರವೇಶಿಸಬಾರದೆಂದು ಹಲಕೆಲವು ಪತ್ರಿಕೆಗಳ ಮೇಲೆ ಹಾಕಿದ ನಿರ್ಬಂಧವನ್ನು ತೆಗೆದುಹಾಕಬೇಕು. ಪತ್ರಿಕಾ ಸಂಪಾದಕರಿಗಾದರೂ ಹೊಣೆಯ ಅರಿವು ಇದೆ. ಸುಳ್ಳು ಸುದ್ದಿಗಳನ್ನು, ಇಲ್ಲವೆ ಹಿಂಸೆಗೆ ಪ್ರೋತ್ಸಾಹ ಕೊಡುವಂಥ ಸುದ್ದಿಗಳನ್ನು ಪ್ರಕಟಿಸಿದರೆ ಅವುಗಳ ಮೇಲೆ ಅವಶ್ಯವಾಗಿ ಕ್ರಮತೆಗೆದುಕೊಳ್ಳಬೇಕು. ಸತ್ಯಸುದ್ದಿಯನ್ನೂ ಪ್ರಕಟಿಸಬಾರದೆಂದು ಹೇಳುವದು ಅತ್ಯಂತ ಪ್ರತಿಗಾಮಿ ಧೋರಣವಾಗುವದು. ಆದುದರಿಂದ ಮೈಸೂರ ಸರಕಾರದವರು ಪತ್ರಿಕಾಕರ್ತರ ಮೇಲಿಯ ಸುದ್ದಿ ಪ್ರಕಟನೆಯ ಹೊಣೆ ಹಾಕಿ ನಿರ್ಬಂಧವನ್ನು ತೆಗೆದಂತೆ ಹೊರಗಿನ ಪತ್ರಿಕೆಗಳ ಮೇಲೆಯೂ ಹೊಣೆ ಹಾಕಿ ನಿರ್ಬಂಧವನ್ನು ತೆಗೆದುಹಾಕುವ ಉದಾರ ಧೋರಣವನ್ನು ವಹಿಸಬೇಕೆಂದು ಸೂಚಿಸುತ್ತೇವೆ.

# ಭಾರತದ ಬಹುಮುಖವಾದ ಸಮಸ್ಯೆಗಳು

## ಜುನಾಗಡದ ಸತ್ಯಾಗ್ರಹ— ಜಿನ್ನಾರವರ ವ್ಯರ್ಥ ಪ್ರಯತ್ನ.... ಸರದಾರರ ಹಿತೋಕ್ತಿ...ನೆಹರೂರವರ ನೀತಿ... ನಿರಾಶ್ರಿತರ ಪುನರ್ನಿವೇಶನ...

### ಸರದಾರರ ಸಾರಿಕೆ

ಪಾಕಿಸ್ತಾನದ ಕುಚೋದ್ಯಕ್ಕೆ ಸರಿಯಾದ ದಂಡನೆ ಮಾಡಲು ಹಿಂದುಸ್ತಾನ ತನ್ನ ನೈತಿಕ ಬಲವನ್ನು ಬೆಳೆಸಿಕೊಳ್ಳಬೇಕೆಂಬ ಅಭಿಪ್ರಾಯದಿಂದ ಕಳೆದ ತಾ. ೨೦ ರ ದಿನ ಅಮೃತಸರದಲ್ಲಿ ಲಕ್ಷೋಪಲಕ್ಷ ಪಂಜಾಬಿಗಳ ಸಭೆಯನ್ನುದ್ದೇಶಿಸಿ ಮಾತನಾಡುತ್ತ, ಸರದಾರ ಪಟೇಲರು—

“ಸೇಡು ಮತ್ತು ಪ್ರತೀಕಾರದ ಸುಳಿಯನ್ನು ಮುರಿದು ಶಾಂತತೆಯನ್ನು ಸ್ಥಾಪಿಸುವುದು ಅತ್ಯಂತ ಅವಶ್ಯವಿದೆ. ಪಾಕಿಸ್ತಾನದತ್ತ ಸಾಗುತ್ತಿರುವ ನಿರಾಶ್ರಿತರಿಗೆ ಸುರಕ್ಷಿತ ಹೋಗಗೊಡಿರಿ. ಅವರ ನಿರ್ಗಮನಕ್ಕೆ ವಿಘ್ನವೊಡ್ಡಿದರೆ ಕೇವಲ ಪಟ್ಟಾಳೆಯಿಂದಷ್ಟೆ ಅಲ್ಲ, ಹಸಿವು ಹಿಂಸೆಗಳಿಂದ ಹಣ್ಣಾದ ನಮ್ಮ ನಿರಾಶ್ರಿತರ ಪರಿಸ್ಥಿತಿಯನ್ನು ಹದಗೆಡಿಸಿದಂತಾಗುವುದು. ಒಂದು ವಾರದ ವರೆಗಾದರೂ ಶೀಖರು ಶಾಂತರಿದ್ದು ನೋಡಬೇಕು. ಇದರ ಪರಿಣಾಮವು ಪಾಕಿಸ್ತಾನದಲ್ಲಿ ಕಂಡು ಬರದಿದ್ದರೆ ತಪ್ಪು ಯಾರದೆಂದು ಜಗತ್ತಿಗೆ ಸ್ಪಷ್ಟವಾಗುವುದು. ಗಡಿಯ ಆಚೆಗಿದ್ದ ನಮ್ಮವರನ್ನು ಈಚೆಗೆ ಕರೆತರುವುದರಲ್ಲಿ ಹಾಗೂ ಈಚಿನ ಎಲ್ಲ ಮುಸಲ್ಮಾನರನ್ನೂ ಆಚೆಗೆ ಕಳುಹುವುದರಲ್ಲಿ ಹಿಂದುಸ್ತಾನದ ಹಿತವಿದೆಯೆಂದು ನಾನು ಮನಗಂಡಿದ್ದೇನೆ ಆಗ ಮಾತ್ರ ನಾವು ನಮ್ಮ ನಿರಾಶ್ರಿತರು ಅಲ್ಲಿ ಬಿಟ್ಟು ಬಂದಂತಹ ನಂದನವನಗಳನ್ನು, ಕಾಮಧೇನುವಿನಂತಹ ಕೃಷಿ ಕ್ಷೇತ್ರಗಳನ್ನು ಇಲ್ಲಿಯೂ ರಚಿಸಲು ಶಕ್ತರಾಗಬಹುದು. ನಿರಪರಾಧಿಗಳನ್ನೂ ನಿಃಸಹಾಯರನ್ನೂ ಸಂಹರಿಸುವುದು ವೀರ ಲಕ್ಷಣವಲ್ಲ. ನಿಮಗೆ ನಿಮ್ಮ ಶೌರ್ಯವನ್ನು ತೋರಲು ತಕ್ಕ ಪ್ರಸಂಗ ಬರಲಿದೆ, ಯೋಗ್ಯ ಸಂಧಿ ಸಿಗಲಿದೆ” ಎಂದು ಗುಡುಗಿದರು.

ಪಟೇಲರ ಗರ್ಜನೆ ಮಾರ್ಮಿಕವಾಗಿದೆ, ಸಂದರ್ಭೋಚಿತವಾಗಿದೆ. ಎಂಬುದನ್ನರಿತು ಭಾಷಣ ಮುಗಿದ ಕೂಡಲೆ ಸಭೆ ಹರ್ಷೋದ್ಗಾರಗಳಿಂದ ಅವರನ್ನು ಸತ್ಕರಿಸಿತು. ಅ್ಯಟ್ಲಿಯವರೊಡನೆ ಮುಂದೆ ಹೇಳುವಂತೆ ಸಹಾಯ ಯಾಚಿಸ ಹೋದ ಜಿನ್ನಾಸಾಹೇಬರ ಹೊಟ್ಟೆಯಲ್ಲಿ ಈ ವೀರವಾಣಿ ತಳಮಳಗೊಳಿಸದಿರದು, ಕಸವಿಸಿಗೊಳಿಸದಿರದು; ಸರದಾರರ ಮಾತಿನ ಪ್ರತಿಕ್ರಿಯೆ ಶಾಂತವಿರೋಚಿತವಾಗಿ ಪಾಕಿಸ್ತಾನದಲ್ಲಿ ನಡೆದರೆ, ನಮ್ಮ ನಿರಾಶ್ರಿತರನ್ನು ಸುರಕ್ಷಿತ ಹೋಗಗೊಟ್ಟು ಹಿಂಸೆಯನ್ನು ನಿಲ್ಲಿಸಿದರೆ ಪಾಕಿಸ್ತಾನವು ಇನ್ನಾದರೂ ಸಂಭಾವಿತಗಿರಿಯನ್ನು ಸಂಪಾದಿಸಬಹುದಾಗಿದೆ; ಇಲ್ಲದೆ ಹೋದರೆ “ಕ್ಷೀಣೋತ್ಸಾಹೀವಾನರಃ” ಎಂಬಂತೆ ಅದಕ್ಕೆ ತಕ್ಕ ಶಿಕ್ಷೆ ದೊರಕದಿರದು; ಸೀತೆಯನ್ನೊಯ್ದು ರಾವಣ ಕೆಟ್ಟಂತಾಗದಿರದು!

### ಜುನಾಗಡದಲ್ಲಿ ಕ್ರಾಂತಿ

ಕಾಠೇವಾಡದ ಸಂಸ್ಥಾನಗಳಲ್ಲಿ ಒಂದಾದ ಜುನಾಗಡವು ಪಾಕಿಸ್ತಾನಕ್ಕೆ ಸೇರಿ ಇಡೀ ಕಾಠೇವಾಡವನ್ನೇ ಗಾಬರಿಗೊಳಿಸಿದ್ದು ಆಗಲೇ ತಿಳಿದ ವಿಷಯವಾಗಿದೆ. ನವಾಬ ಸಾಹೇಬರು ಬಹುಸಂಖ್ಯಾಕ ಪ್ರಜೆಗಳ ಅಭಿಪ್ರಾಯದ ವಿರುದ್ಧ, ಸುತ್ತುಮುತ್ತಲಿನ ಸಂಸ್ಥಾನಿಕರ ಮತಕ್ಕೆ ವಿರುದ್ಧವಾಗಿ, ಹಿಂದುಸ್ತಾನದ ಭೌಗೋಲಿಕ ವ್ಯಾಪ್ತಿಯನ್ನು ಕಡೆಗಣಿಸಿ ಪಾಕಿಸ್ತಾನವನ್ನು ಸೇರಿ ತಮ್ಮ ಧರ್ಮಾಂಧತೆಯನ್ನು ಡಂಗುರ ಹೊಡೆದಿದ್ದಾರೆಂಬುದನ್ನು ಕೇಳಿದ ಹಿಂದುಸ್ತಾನ ಸರಕಾರದ ಸಂಸ್ಥಾನ ಶಾಖೆಯು ಒಂದು ಪ್ರಕಟನೆ ಹೊರಡಿಸಿ ಪಾಕಿಸ್ತಾನವನ್ನು ಸೇರಿದ ಉಕ್ತ ಸಂಸ್ಥಾನದ ಪ್ರಶ್ನೆಯನ್ನು ಅಲ್ಲಿಯ ಜನಮತ ತೆಗೆದುಕೊಂಡು ಬಗೆಹರಿಸಬೇಕೆಂದು ಸೂಚಿಸಿದೆ. ಸರಕಾರದ ಪ್ರಕಟನೆ ಸುದೀರ್ಘವಿದ್ದು ಅದರಲ್ಲಿ ಹಿಂದುಸ್ತಾನ ಸರಕಾರದವರು ಈ ವಿಷಯವನ್ನು ಜುನಾಗಡ ಮತ್ತು ಪಾಕಿಸ್ತಾನ ಸರಕಾರಗಳೊಡನೆ ವಿಚಾರವಿನಿಮಯದಿಂದ ಬಗೆಹರಿಸಲು ಪ್ರಯತ್ನಿಸುವರಾದರೂ ಸುತ್ತಲಿನ ಸಂಸ್ಥಾನಗಳ ರಕ್ಷಣೆಯನ್ನು ಅವಶ್ಯವೆನಿಸಿದಾಗ ಮಾಡಲೇಬೇಕಾಗುವುದೆಂದು ಸ್ಪಷ್ಟ ಮಾಡಿದ್ದಾರೆ.

ಇದರ ಮೇಲೆ ಗುಜರಾಥ ಹಾಗೂ ಮಧ್ಯ ಹಿಂದುಸ್ತಾನ ಸಂಸ್ಥಾನಗಳ ಕೇಂದ್ರ ಸಂಸ್ಥೆಯವರು ಮುಂಬಯಿಯಲ್ಲಿ ಸಭೆ ಸೇರಿ ಜುನಾಗಡವು ಪಾಕಿಸ್ತಾನ ಸೇರಿದ್ದರಿಂದ ದೇಶದ ಕ್ರಾಂತಿಗೆ ಗಂಡಾಂತರವುಂಟಾಗಿಯೆಂದೂ ಆ ಕಾರಣದಿಂದ ತಕ್ಕ ಕ್ರಮ ತೆಗೆದುಕೊಳ್ಳಬೇಕೆಂದೂ ಹಿಂದುಸ್ತಾನ ಸರಕಾರಕ್ಕೆ ಬಿನ್ನವಿಸಿಕೊಂಡರು. ಜುನಾಗಡದೊಳಗಿನ ಜಮೀನದಾರರೂ ಪಾಳೆಯಗಾರರೂ ಈಗ ಶ್ರೀ. ಶ್ಯಾಮಲದಾಸ ಗಾಂಧಿಯವರ ನೇತೃತ್ವದಲ್ಲಿ ಸ್ಥಾಪಿಸಲ್ಪಟ್ಟ ತಾತ್ಪೂರ್ತಿಕ ಸರಕಾರಕ್ಕೆ ಮನ್ನಣೆಯೀಯುತ್ತಿರುವುದಾಗಿ ಹೇಳಿಕೆಕೊಟ್ಟಿದ್ದಾರೆ. ಮುಖ್ಯ ಮಂತ್ರಿಗಳಾದ ಶ್ರೀ. ಗಾಂಧಿಯವರು ತಮ್ಮ ... ಸರಕಾರದ ಕೇಂದ್ರವನ್ನು ರಾಜಕೋಟೆಯಲ್ಲಿ ಸ್ಥಾಪಿಸಿದ್ದಾರೆ. ಇದನ್ನು ಸುತ್ತುಮುತ್ತಲಿನ ರಾಜರೂ ಮಾನಿಸುವರೆಂಬಲ್ಲಿ ಸಂದೇಹವಿಲ್ಲ. ನವಾನಗರದ ಜಾಮಸಾಹೇಬರು ಗಂಭೀರವಾಗಿ ಹಿಂದುಸ್ತಾನ ಸರಕಾರಕ್ಕೆ ಜುನಾಗಡ ಪಾಕಿಸ್ತಾನ ಸೇರಿದುದರ ವಿರುದ್ಧ ದೂರು ಕೊಟ್ಟಿರುವುದು ಇದಕ್ಕೆ ಸಾಕ್ಷಿಯಾಗಿದೆ. ಪಾಕಿಸ್ತಾನದ ಮಂತ್ರಿಗಳು ಅವರ ದೂರನ್ನು ಅಲ್ಲಗಳೆದರೆ ಹಿಂದುಸ್ತಾನ ಸರಕಾರದವರು ಆ ವಿಷಯವನ್ನು ಪಾಕಿಸ್ತಾನದೊಡನೆ ಚರ್ಚಿಸಿ ಇತ್ಯರ್ಥ ಪಡಿಸುವ ಆಶ್ವಾಸನವನ್ನಿತ್ತರು.

ಬಹುಸಂಖ್ಯಾಕ ಪ್ರಜೆಗಳಾದ ಹಿಂದುಗಳಲ್ಲಿ ಪ್ರಾದೇಶಿಕ ಅಲ್ಪಸಂಖ್ಯಾಕತೆಯುಳ್ಳವರು ಸ್ಥಳಾಂತರಿಸುವುದು ನವಾಬರ ಹಸ್ತಕರಾದ ಮುಸ್ಲಿಮರ ಭೀತಿಯಿಂದಲೇ ಎಂಬುದು ಸ್ಪಷ್ಟವಿದೆ. ಈಗಾಗಲೇ ಜನರೆಚ್ಚತ್ತು ಹೊಣೆಗಾರ ಸರಕಾರಕ್ಕಾಗಿ ಚಳವಳಿ ಎಬ್ಬಿಸಿ ಮೇಲೆ ಹೇಳಿದಂತೆ ಪ್ರತಿಸರಕಾರ ಸ್ಥಾಪನೆ ಮಾಡುವಲ್ಲಿಯ ವರೆಗೆ ಹೋದುದಲ್ಲದೆ ಸಶಸ್ತ್ರ ದಾಳಿಗೂ ಅವರು ತಯಾರಿರುವರೆಂಬುದನ್ನು ಕಳೆದ ತಾ.೨೦ ರಂದು ರಾಜಕೋಟೆಯ ಮಧ್ಯದಲ್ಲಿರುವ ಜುನಾಗಡ ನವಾಬರ ಸರಕಾರೀ ಬಂಗಲೆಯನ್ನು ಆಕ್ರಮಿಸುವ ಸಾಹಸದಿಂದ ತೋರಿಸಿಕೊಟ್ಟಿದ್ದಾರೆ. ಸಶಸ್ತ್ರ ಯುವಕರೀಗ ಬಂಗಲೆಯ ಕಾವಲಿಗಿದ್ದು ಅದರ ಮೇಲೆ ಹಿಂದುಸ್ತಾನದ ರಾಷ್ಟ್ರಧ್ವಜ ಹಾರುತ್ತಿದೆ. ಬಂಗಲೆಗೆ “ಸ್ವತಂತ್ರ ಜುನಾಗಡ ಭವನ”ವೆಂದು ಹೆಸರಿಟ್ಟು ಅದನ್ನು ಹೋರಾಟದ ಕೇಂದ್ರವನ್ನಾಗಿ ಮಾಡಲಾಗುವುದೆಂದು ತಿಳಿದುಬಂದಿದೆ. ಇನ್ನಾದರೂ ಶ್ವಾನಪ್ರಿಯರಾದ ನವಾಬ ಸಾಹೇಬರು ತಾವು ಸಾಕಿದ ಸಾವಿರಾರು ನಾಯಿಗಳ ಬೇಡಿಕೆಯನ್ನು ಪೂರಯಿಸುವುದಕ್ಕಿಂತ ತಮ್ಮ ಪ್ರಜೆಗಳ ಬೇಡಿಕೆಯನ್ನು ಪೂರೈಯಿಸುವುದು ಹೆಚ್ಚಿನ ಕರ್ತವ್ಯವೆಂಬುದನ್ನು ಅರಿತು ಆ ಪ್ರಕಾರ ಜುನಾಗಡದಲ್ಲಿ ಹೊಣೆಗಾರ ರಾಜ್ಯ ಸ್ಥಾಪಿಸಿ, ಅನಂತರ ಹಿಂದುಸ್ತಾನದ ಒಕ್ಕೂಟಕ್ಕೆ ಸೇರಿ ಹಿಂದುಸ್ತಾನದ ಹಾಗೂ ತಮ್ಮ ಮತ್ತು ತಮ್ಮ ನೆರೆಯ ಸಂಸ್ಥಾನಗಳ ಶಾಂತಿ ಸುರಕ್ಷಿತತೆಗಳನ್ನು ಕಾಯ್ದುಕೊಳ್ಳಲು ನೆರವಾಗುವರೆಂದು ಹಾರೈಕೆ. ಹಾಗಲ್ಲದೆ ಪಾಕಿಸ್ತಾನದವರೂ ನವಾಬಸಾಹೇಬರೂ ಸೇರಿ ತಮ್ಮ ಸದ್ಯದ ಪ್ರತಿಗಾಮೀ ಧೋರಣವನ್ನೇ ಮುಂಬರಿಸುತ್ತ ಹೋದರೆ ಉಭಯ ಸಾಮಂತ ರಾಜ್ಯಗಳಲ್ಲಿ ಯುದ್ಧ ಸಂಭವಿಸುವ ಪ್ರಸಂಗಉಂಟಾದೀತು!

### ಪಾಕಿಸ್ತಾನದ ವಚನಭಂಗ

ಪಾಕಿಸ್ತಾನದಿಂದ ಹಿಂದುಸ್ತಾನಕ್ಕೆ ಓಡಿಬರುತ್ತಿರುವ ನಿರಾಶ್ರಿತರನ್ನು ಝಡತಿ ಮಾಡದೆ ಹಾಗೇ ಬಿಡತಕ್ಕದ್ದಲ್ಲವೆಂದು ಸಿಂಧ ಸರಕಾರದ ಮುಖ್ಯ ಪ್ರಧಾನರು ಇತ್ತೀಚೆಗೆ ಹೇಳಿದದ್ದು ತೊಡಕಿಗೆ ಕಾರಣವಾಗಿದೆ. ಪಾಕಿಸ್ತಾನ ಮತ್ತು ಹಿಂದುಸ್ತಾನ ಸರಕಾರಗಳಲ್ಲಿ ನಿರಾಶ್ರಿತರ ಬಗ್ಗೆ ಆದ ಒಡಂಬಡಿಕೆಯನ್ನು ಇದರಿಂದ ಮುರಿದಂತಾಗುತ್ತದೆ. ನಿರಾಶ್ರಿತರ ಜಂಗಮ ಆಸ್ತಿಗಳ ಝಡತಿ ಮಾಡುವ ಅನ್ಯಾಯವನ್ನು ಸಿಂಧ ಸರಕಾರದ ಮುಖ್ಯ ಪ್ರಧಾನರು ಕೆಲವೊಂದು ಕ್ಷುಲ್ಲಕ ಕಾರಣ ಮುಂದೆ ಮಾಡಿ ಸಮರ್ಥಿಸಿಕೊಂಡಿದ್ದರೂ ಹಿಂದುಸ್ತಾನ ಸರಕಾರ ಮಾತ್ರ ಈ ವರೆಗೆ ಒಡಂಬಡಿಕೆಗೆ ವಿರುದ್ಧ ಹೋಗಿಲ್ಲ. ಬಡ ಮುಸಲ್ಮಾನರು ಒತ್ತೆ ಇಟ್ಟ ಆಭರಣಗಳನ್ನು ಸ್ತ್ರೀಯರು ಒಯ್ಯುತ್ತಿರುವರೆಂದು ಅವರು ಹೊರಿಸಿದ ಆರೋಪವು “ಪಾಕಿಸ್ತಾನ ಸತ್ಯ”ವೇ ಆಗಿದೆ. ಇದನ್ನರಿತು ಇದರ ವಿರುದ್ಧ ಪಾಕಿಸ್ತಾನ ಸರಕಾರಕ್ಕೆ ಹಿಂದುಸ್ತಾನ ಸರಕಾರ ಎಚ್ಚರಿಕೆ ಕೊಡಬಹುದೆಂದು ಹೇಳಲಾಗುತ್ತದೆ. ಈ ಸಂದರ್ಭದಲ್ಲಿ “ಪತಿಯ ತಾನೇ ಥಳಿಸಿ ಪತಿವ್ರತೆ ರೋದಿಸುವ ಸತಿಯಂಥ ಕುಟಿಲ ರಾಜರಿಗೆ ದಂಡಿಸದೆ, ಮತಿ ಮೂಡದದ್ಯು ಕಾರ್ಯಜ್ಞ” ಎಂಬ ಮಾತನ್ನು ಹೇಳದಿರಲಾಗದು. ಹಿಂದುಸ್ತಾನಕ್ಕೆ ಬರುವ ಪ್ರಜೆಗಳನ್ನು ಲೂಟಿ ಮಾಡುವದಲ್ಲದೆ ಅದಕ್ಕೆ ನ್ಯಾಯಾಭಾಸದ ಕಾರಣ ಕೊಡಹೋಗುವದು; ಅನಂತರ ಜಿನ್ನಾರು ಲಂಡನ್ನಿನಲ್ಲಿ ದೂರು ಕೊಡುವದು. ಇದೊಂದು ತೋಳನ ನ್ಯಾಯವೇ ಸರಿ. ಈ ವಚನ ಭಂಗವನ್ನು ತಪ್ಪೆಂದೊಪ್ಪಿ ಸಕಾಲದಲ್ಲಿ ನಮ್ಮ ನಿರಾಶ್ರಿತರನ್ನು ಆಸ್ತಿ ಸಮೇತ ಕಳುಹದಿದ್ದಲ್ಲಿ ಹಿಂದುಸ್ತಾನ ಸರಕಾರ ಪ್ರತೀಕಾರೋಪಾಯವನ್ನು ಕೈಕೊಳ್ಳುವುದು ಅನಿವಾರ್ಯವಾಗುವದೆಂಬುದನ್ನು ಯಾವ ರಾಷ್ಟ್ರನಿಷ್ಠ ಹಿಂದೀ ಪ್ರಜೆಯೂ ಅಲ್ಲಗಳೆಯಲಾರನು.

### ಜಿನ್ನಾರ ಸಹಾಯ ಯಾಚನೆ

ಪೂರ್ವ ಪಂಜಾಬಿನ ದಂಗೆಗಳನ್ನು ಅತಿಶಯೋಕ್ತಿ, ಉತ್ಪ್ರೇಕ್ಷೆ, ಮಹೋಪಮೆ ಮುಂತಾದ ಅಲಂಕಾರಗಳಿಂದ ಬಣ್ಣಿಸುತ್ತಲೂ ಪಶ್ಚಿಮ ಪಂಜಾಬದಲ್ಲಾದ ಆಸುರೀ ಲೀಲೆಯ ಬಗ್ಗೆ ಒಂದು ಮಾತನ್ನು ಕೂಡ ಹೇಳದೆಯೂ ಪಾಕಿಸ್ತಾನ ಸರಕಾರ ಹಾಗೂ ಅದರ ಪ್ರಾಂತಿಕ ಮಂತ್ರಿಗಳೂ ಮುತ್ಸದ್ದಿಗಳೂ ಕಲಹವೆಬ್ಬಿಸಿರುವುದು ಶಂಖನಾದದಂತೆ ಜಗತ್ತಿನ ಎಂಟು ಮೂಲೆಗಳಿಗೂ ಕೇಳಿಸಿದೆ. ಇದಕ್ಕೆ ಪಂಡಿತ ನೆಹರು ಸದುತ್ತರ ಕೊಟ್ಟಿದ್ದಾರೆ, ಸರದಾರರು ಸಕಾಲಿಕ ಎಚ್ಚರಿಕೆ ಕೊಟ್ಟಿದ್ದಾರೆ. ಹಿಂದುಸ್ತಾನದಿಂದ ಪಾಕಿಸ್ತಾನಕ್ಕೆ ತೆರಳುವ ನಿರಾಶ್ರಿತರಿಗೆ ಎಂತಹ ಸವಲತ್ತುಗಳನ್ನು ಕೊಡಲಾಗುತ್ತಿದೆಯೋ ಅದೇರೀತಿ ಪಾಕಿಸ್ತಾನದಿಂದ ಹಿಂದುಸ್ತಾನಕ್ಕೆ ಬರುವ ನಿರಾಶ್ರಿತರಿಗೂ ಕೊಡಬೇಕೆಂದು ಉಭಯ ಸಾಮಂತ ರಾಜ್ಯಗಳ ಮಂತ್ರಿಗಳ ಸಂಯುಕ್ತ ಸಭೆ ಸಾರಿದೆ. ಇಷ್ಟಾದರೂ ಇಲ್ಲಿರುವ ನಿರಾಶ್ರಿತರನ್ನು ಸರಿಯಾಗಿನಡೆಸಿ ಕೊಳ್ಳುತ್ತಿಲ್ಲವೆಂದು ಪ್ರತೀಕಾರ ಭಾವನೆಯಿಂದ ಅಲ್ಲಿಂದ ಇತ್ತ ಹೊರಟವರ ಆಸ್ತಿಪಾಸ್ತಿಗಳನ್ನು ಅಧಿಕೃತವಾಗಿ, ಅನಧಿಕೃತವಾಗಿ ಅಪಹರಿಸುತ್ತ ಹೋಗಿರುವುದಲ್ಲದೆ ಈಗ ಹಿಂದುಸ್ತಾನ ಸರಕಾರವು ಜೀಯೆನ್ನಲಿಲ್ಲವೆಂಬ ಅಸೂಯೆಯಿಂದ ಬ್ರಿಟಿಶ ಮುಖ್ಯ ಪ್ರಧಾನರಾದ ಅ್ಯಟ್ಲಿಯವರಲ್ಲಿ, “ಮೂಗು ಮೊಲೆಯ ಕೊಯ್ದು ಕೋಪಕ್ಕೆ ತಾನುಸಾಗಿಬಂದಳು ಲಂಕಾದ್ವೀಪಕ್ಕೆ” ಎಂಬಂತೆ ಸೀಮಾರಕ್ಷಣೆಗಾಗಿ ಬ್ರಿಟಿಶ ಸೈನಿಕರನ್ನು ಕಳುಹಿ ಕೊಡಿರೆಂದು ಯಾಚಿಸಿದ್ದಾರೆ. ಈ ಮೂರ್ಖಯಾಚನೆಯಮೇಲೆ ಬ್ರಿಟಿಶ ಮಂತ್ರಿಮಂಡಲದಲ್ಲಿ ಚರ್ಚೆನಡೆದು ಅದನ್ನು ಸರ್ವಾನುಮತದಿಂದ ನಿರಾಕರಿಸಲಾಯಿತು. ಆಬಗ್ಗೆ ಲಂಡನ್ನಿನ ಪಾಕಿಸ್ತಾನ ಭವನದಲ್ಲಿ ವಿಚಾರಿಸಲು ಅವರು ಇದು ತಮಗೆ ಗೊತ್ತಿಲ್ಲೆಂದೂ ಬ್ರಿಟಿಶರ ಸೈನ್ಯ ಪಾಕಿಸ್ತಾನದಲ್ಲಿ ಉಳಿಯುವಂತೆ ಜಿನ್ನಾರು ಬಿನ್ನವಿಸುವುದು ಶಕ್ಯವಿಲ್ಲೆಂದೂ—ಅಭಿಪ್ರಾಯವ್ಯಕ್ತ ಮಾಡಿದರು. ಶಾಂತಿ ಅವಶ್ಯಕವೆಂದು ಹೇಳುತ್ತ ಸಮರದ ಬೀಜ ಬಿತ್ತುರುವ, “ಹೇಳುವುದು ಶಾಸ್ತ್ರ ಹಾಕುವುದು ಗಾಳ” ವೆಂಬ ನೀತಿಯನ್ನನುಸರಿಸುತ್ತಿರುವ ಜಿನ್ನಾ ಸರಕಾರ ಹೀಗೆ ಮಾಡುತ್ತ ಹೋದರೆ ಕೇಡುಗಾಲ ಸಮಿಪಿಸಿತೆಂದೇ ತಿಳಿಯಬೇಕು. ಮುಸ್ಲಿಮರ ಹಿತವನ್ನಾದರೂ ಕಾಯ್ದುಕೊಳ್ಳಬೇಕೆಂಬ ದೃಷ್ಟಿಯಿದ್ದಿದ್ದರೆ ಜಿನ್ನಾರು ಇಂತಹ ದುರುದ್ಯೋಗಕ್ಕೆ ಕೈಹಾಕುತ್ತಿರಲಿಲ್ಲ, ಜಗತ್ತಿನೆದುರು ತಮ್ಮ ಬುದ್ಧಿಗೇಡಿತನವನ್ನು ಜಾಹೀರುಮಾಡಿಕೊಳ್ಳುತ್ತಿರಲಿಲ್ಲ.

### ಜವಾಹರರ ಗರ್ಜನೆ

ಪ್ರಜೆಗಳ ಕರ್ತವ್ಯವನ್ನು ನಿರ್ದೇಶಿಸುತ್ತ ಹಿಂದುಸ್ತಾನದ ಮುಖ್ಯಪ್ರಧಾನರಾದ ಪಂ. ಜವಾಹರಲಾಲರು ಹೊಸದಿಲ್ಲಿಯ ಒಂದು ಸಾರ್ವಜನಿಕ ಸಭೆಯಲ್ಲಿ ಮಾತಾಡುತ್ತ ದೇಶ ನಿಷ್ಠರಾಗಿ ಹಿಂದುಸ್ತಾನದಲ್ಲಿ ವಾಸಿಸುವವರಿಗೆ ಈ ರಾಷ್ಟ್ರದಲ್ಲಿ ವಾಸಿಸಲು ಅಧಿಕಾರವಿದೆ. ಅಂಥವರನ್ನೂ ಅವರ ಹಿತಸಂಬಂಧಗಳನ್ನೂ ರಕ್ಷಿಸುವುದು ಹಿಂದುಸ್ತಾನಸರಕಾರದ ಕರ್ತವ್ಯವಾಗಿದೆ. ಈದೇಶವು ತಮ್ಮದೆಂದು ಮನಸಾಭಾವಿಸಿ ಹೊರಗಿನವರ ಸಹಾಯವನ್ನು ಅಪೇಕ್ಷಿಸದ ಮುಸ್ಲಿಮರಿಗೆಲ್ಲ ಇಲ್ಲಿ ನೆಲೆಸಲು ಸ್ವಾಗತವಿದೆ. ಆದರೆ ಇಲ್ಲಿ ದೇಶನಿಷ್ಠರಾಗಿ ಉಳಿಯದವರಿಗೆ ಹೊರಟುಹೋಗಲು ಯೋಗ್ಯವಾದ ರಕ್ಷಣೆ ಕೊಡಲಾಗುವದು. ಎಂದುಗರ್ಜಿಸಿದರು. ಅವರು ಹೀಗೆ ಮಾತಾಡಲು ಹಿಂದುಸ್ತಾನದಲ್ಲಿ ಇನ್ನೂ ರಾಷ್ಟ್ರದ್ರೋಹಿಗಳಾದ ಮುಸಲ್ಮಾನರಿರುವರೆಂಬುದೇ ಕಾರಣವೆಂದು ಯಾರಿಗಾದರೂ ಕೂಡಲೆ ತಿಳಿಯದಿರದು. ಮತ್ತೊಮ್ಮೆ ಅವರು “ನಾನು ಅಧಿಕಾರದಲ್ಲಿರುವವರೆಗೆ ಹಿಂದುಸ್ತಾನವು ಹಿಂದುಗಳ ರಾಷ್ಟ್ರವಾಗದು“ಎಂದೂ” ಮುಸ್ಲಿಂ ಲೀಗಿನವರು ಸ್ವಾತಂತ್ರ್ಯಪ್ರಾಪ್ತಿಯ ಸಮಯ ಬಂದಾಗಲೆಲ್ಲ ಹಾನಿಮಾಡಿದ್ದಾರೆ, ಅವರೆಷ್ಟು ರಾಷ್ಟ್ರದ್ರೋಹಿಗಳೋ ಸ್ವಾತಂತ್ರ್ಯ ಸಮರಕಾಲದಲ್ಲಿ ಬ್ರಿಟಿಶರ ಹಸ್ತಕರಾಗಿ ಎಡರೊಡ್ಡಿದ ಹಿಂದು ಶೀಖರೂ ಅಷ್ಟೇ ದ್ರೋಹಿಗಳು. ಸದ್ಯದ ಪರಿಸ್ಥಿತಿಯಲ್ಲಿ ಶಾಂತತೆಗೆ ಭಂಗತಂದು ರಾಷ್ಟ್ರವನ್ನು ಹಾಳುಗೆಡಹಿ ದಿವಾಳಿ ಮಾಡುವವರೇ ನಿಜವಾದ ರಾಷ್ಟ್ರದ್ರೋಹಿಗಳು” ಎಂದೂ ಸಿಡಿನುಡಿದರು. ಈ ಸಮಯೋಚಿತಬುದ್ಧಿವಾದವನ್ನು ಮನದಂದು ಹಿಂದುಸ್ತಾನದ ನಾಗರಿಕರು ನಮ್ಮ ದೇಶದ ನೇತೃಗಳನ್ನು ಉಭಯ ಸಂಕಟದಲ್ಲಿ ದೂಡದೆ ನೈತಿಕ ನಿಷ್ಠೆಯಿಂದ ಅವರ ಹಾಗೂ ನಮ್ಮ ರಾಷ್ಟ್ರದ ಪ್ರತಿಷ್ಠೆಯನ್ನು ಹೆಚ್ಚಿಸಿ ಆ ಸಾಮರ್ಥ್ಯದಿಂದ ಪಾಕಿಸ್ತಾನ ನಿರಲಿ ಇನ್ನಾವುದಿರಲಿ ಕೆಣಕಬರುವ ದುಷ್ಕಾರ್ಯಪ್ರವೃತ್ತರನ್ನು ಶಾಸನಬದ್ಧ ರೀತಿಯಿಂದ ದಂಡಿಸಲು ಅನುಕೂಲಮಾಡಿ ಕೊಡುವುದು ಅನಿವಾರ್ಯ ಕರ್ತವ್ಯವಾಗಿದೆ.

### ನಿರಾಶ್ರಿತರ ಸಮಸ್ಯೆ

ಲಕ್ಷಾವಧಿ ಮುಸಲ್ಮಾನೇತರ ನಿರಾಶ್ರಿತರನ್ನು ಒಕ್ಕಲತನದಲ್ಲಿ, ವ್ಯಾಪಾರದಲ್ಲಿ ಮತ್ತು ಬೇರೆ ವ್ಯವಸಾಯಗಳಲ್ಲಿ ನೆಲೆಗೊಳಿಸಬೇಕಾಗಿದೆ, ಇದರಲ್ಲಿ ಹೊರಹೋದ ಮುಸಲ್ಮಾನರು ತೆರವು ಮಾಡಿದ ಸ್ಥಳಗಳಲ್ಲಿ ಹಲವರು ಉಳಿಯಬಹುದು; ಆದರೆ ಉಳಿದವರಿಗೆ ನಮ್ಮಿಂದ ಉತ್ತೇಜನ, ಸಹಾಯ, ಸಹಾನುಭೂತಿಗಳು ಅವಶ್ಯವಿವೆ. ಆದುದರಿಂದ ಈ ಕಾರ್ಯಕ್ಕೆ ಪೂರ್ವ ಪಂಜಾಬಿನ ಸರಕಾರವೂ ಅಲ್ಲಿಯ ಸಂಸ್ಥಾನಗಳೂ ಕೇಂದ್ರ ಸರಕಾರವೂ ನೆರವಾಗಬೇಕು ಎಂದು ಕೇಂದ್ರ ಸರಕಾರದ ಸಂಸ್ಥಾನಶಾಖೆಯ ಆಶ್ರಯದಲ್ಲಿ ಸಭೆ ಸೇರಿದ ಪೂರ್ವ ಪಂಜಾಬಿನ ಸಂಸ್ಥಾನಿಕರನ್ನುದ್ದೇಶಿಸಿ ಹಿಂದುಸ್ತಾನ ಸಂಸ್ಥಾನ ಮಂತ್ರಿಗಳಾದ ಸರದಾರರು ಹೇಳಿದರು. ಅಲ್ಲದೆ, ಸುಮಾರು ೧೫ ರಿಂದ ೧೮ ಲಕ್ಷದಷ್ಟು ಹಳ್ಳಿಯ ನಿರಾಶ್ರಿತರನ್ನು ನೆಲೆಗೊಳಿಸುವದರ ಬಗ್ಗೆ ವ್ಯವಸ್ಥೆ ಮಾಡಬೇಕಾಗಿದೆ; ಮತ್ತು ಪಟ್ಟಣಗಳಿಂದ ಬಂದ ನಿರಾಶ್ರಿತರ ಸಂಖ್ಯೆಯು ೧೦ ಲಕ್ಷ ವಿರುವದು. ಹಳ್ಳಿಯ ನಿರಾಶ್ರಿತರಿಗೆ ನೂರಕ್ಕೆ ೭೫ ದ ಕ್ಕಿಂತ ಹೆಚ್ಚು ಜನರಿಗೆ ಪೂರ್ವ ಪಂಜಾಬು ಆಶ್ರಯ ಕೊಡಬಹುದೆಂದು ಎನಿಸುವುದಿಲ್ಲ. ಆಶ್ರಯ ಕೊಟ್ಟರೂ ಅವರ ಜೀವನ ಮಟ್ಟ ಅಧೋಗತಿಗಿಳಿಯಬೇಕಾಗುವುದು. ಆದುದರಿಂದ ಪ. ಪಂಜಾಬಿನ ೩ ಲಕ್ಷ ಹಳ್ಳಿಯ ಕುಟುಂಬಗಳಲ್ಲಿ ೨ ಲಕ್ಷವನ್ನು ಪೂ. ಪಂಜಾಬಿನಲ್ಲಿ ನಿಲ್ಲಿಸಿ ೭೫ ಸಾವಿರ ಕುಟುಂಬಗಳಿಗೆ ಭೂಮಿಯನ್ನು ಒದಗಿಸಲು ಸಂಸ್ಥಾನಗಳನ್ನು ಕೇಳಿಕೊಳ್ಳಲಾಗುವದು. ಸಾಮುದಾಯಿಕ ಭೂಸುಧಾರಣೆ ಪ್ರಾರಂಭಿಸಲ್ಪಡುತ್ತದೆ ಎಂದು ಮುಂತಾಗಿ ಪೂ. ಪಂಜಾಬಿನ ನಿರಾಶ್ರಿತ ಪುನರ್ನಿವೇಶನದ ಅಧಿಕಾರಿಗಳೆಂದರು.

ಸೆಪ್ಟಂಬರ ೫ ರಿಂದ ೨೨ ನೆಯ ದಿನಾಂಕದ ವರೆಗೆ ಸುಮಾರು ೫ ಲಕ್ಷ ಮುಸಲ್ಮಾನೇತರರು ಪ. ಪಂಜಾಬಿನಿಂದ ಪೂ. ಪಂಜಾಬಿಗೆ ಸ್ಥಳಾಂತರ ಮಾಡಿದರೆಂದು ಸೈನ್ಯಶಾಖೆಯ ಸ್ಥಾನಾಂತರ ವ್ಯವಸ್ಥಾಮಂಡಲದ ವರದಿಯಿಂದ ಗೊತ್ತಾಗುತ್ತದೆ. ಪೂ. ಪಂಜಾಬಿನಿಂದ ಪಶ್ಚಿಮಕ್ಕೆ ಹೋದ ಮುಸಲ್ಮಾನರ ಸಂಖ್ಯೆ ೩ ಲಕ್ಷವೆಂದು ತಿಳಿಯುತ್ತದೆ.

ಅಜಸ್ರಧಾರೆಯಿಂದ ಈ ಪ್ರಕಾರ ಮುಸಲ್ಮಾನೇತರ ನಿರಾಶ್ರಿತರು ಹಿಂದುಸ್ತಾನದ ನಾನಾ ಭಾಗಗಳಿಗೆ ಬರುತ್ತಿದ್ದಾರೆ. ಜಾತಿ ಧರ್ಮ ನೀತಿ ನಿಯಮ ಅನ್ನಬಟ್ಟೆ ಈ ಎಲ್ಲದಕ್ಕೂ ಭಂಗವುಂಟಾಗಿ ಪಾಕಿಸ್ತಾನದಿಂದ ಬಂದ ಇವರನ್ನು ಸಮಾಧಾನಗೊಳಿಸಿ ಸಂರಕ್ಷಿಸುವುದು ಹಿಂದುಸ್ತಾನದ ಕರ್ತವ್ಯವಾಗಿದೆ. ಈ ಬಡ ಸೋದರರ ಪುನರ್ನಿವೇಶನದ ವ್ಯವಸ್ಥೆ ಎಷ್ಟು ಕಠಿನವೆನಿಸಿದರೂ ಸಾರ್ವಜನಿಕರೂ ನಮ್ಮ ಸರಕಾರಗಳೂ ಅವರಿಗೆ ಯೋಗ್ಯ ಅನುಕೂಲ ಮಾಡಿಕೊಟ್ಟು ಅವರ ಗೋಳನ್ನು ಹರಿಸಿ ಪ್ರತಿಫಲವಾಗಿ ನಮ್ಮ ಗೌರವ ಪ್ರತಿಷ್ಠೆ, ಧರ್ಮಗಳನ್ನು ಕಾಯ್ದುಕೊಳ್ಳುವುದಲ್ಲದೆ ಅವರ ಶ್ರಮದಿಂದ ನಮ್ಮ ಕೃಷಿ ಕೈಗಾರಿಕೆಗಳ ಉತ್ಪನ್ನವನ್ನೂ ಹೆಚ್ಚಿಸಿಕೊಳ್ಳಬಹುದಾಗಿದೆ. ಇಂತಹ ಯೋಜನೆಗಳನ್ನು ತಯಾರಿಸಿ ಆಚರಣೆಗೆ ತರುವಲ್ಲಿ ಸರ್ವರೂ ಸಹಕರಿಸುವರೆಂದು ನಮ್ಮ ಭರವಸೆ.

---

## ಠಾಕೂರದಾಸ ಸಮಿತಿಯ ಕಾರ್ಯಾರಂಭ

### ಆಹಾರ ಧಾನ್ಯ ಧೋರಣದ ವಿಮರ್ಶೆ

ಪುರುಷೋತ್ತಮದಾಸ ಠಾಕೂರದಾಸರ ಅಧ್ಯಕ್ಷತೆಯಲ್ಲಿ ನಿಯಮಿತವಾಗಿದ್ದ ಆಹಾರ ಧಾನ್ಯ ಧೋರಣ ಸಮಿತಿಯ ಪ್ರಥಮ ಸಭೆಯು ಸೆಪ್ಟೆಂಬರ ೩೦ ರಲ್ಲಿ ಹೊಸದಿಲ್ಲಿಯಲ್ಲಿ ಸೇರಿತ್ತು. ಪ್ರಾಥಮಿಕ ಚರ್ಚೆಯಾದ ಬಳಿಕ ಮುಂದಿನ ಹಂಗಾಮಿನಲ್ಲಿ ಹಿಂದುಸ್ತಾನದಲ್ಲಿ ಹಾಗೂ ಸಂಸ್ಥಾನಗಳಲ್ಲಿ ಆಹಾರ ಧಾನ್ಯದ ವಿಷಯವಾಗಿ ಸ್ವೀಕರಿಸಬೇಕಾದ ಧೋರಣೆಯ ಬಗ್ಗೆ ಮೊದಲು ಚರ್ಚಿಸಬೇಕೆಂದೂ ಮತ್ತು ಆ ಬಗ್ಗೆ ಬೇಗನೆ ಯಾವುದಾದರೊಂದು ನಿರ್ಧಾರಕ್ಕೆ ಬರಬೇಕೆಂದೂ ಗೊತ್ತಾಯಿತು.




## ಇಂಡೋಚೀನದ ಅವಸ್ಥೆ

ಇಂಡೋಚೀನ ಹಾಗೂ ಫ್ರೆಂಚರ ಸಮಸ್ಯೆ ಇನ್ನೂ ಪರಿಹಾರವಾಗಿಲ್ಲ. ಅನಾಮಿನ ಹಿಂದಿನ ಚಕ್ರವರ್ತಿಯಾದ ಬಾವದಾಯಿಯವರಿಂದ ಕೆಲವು ಮಟ್ಟಿಗೆ ಪ್ರಶ್ನೆ ಇತ್ಯರ್ಥವಾಗಬಹುದೆಂದು ಆಶಿಸಿದ ಫ್ರೆಂಚರಿಗೆ ಈಗ ನಿರಾಶೆಯುಂಟಾಗಿದೆ. ದಾಯಿಯವರಿಗೆ ಫ್ರೆಂಚರೊಡನೆ ಮಾತುಕತೆ ನಡೆಸುವ ಇಷ್ಟವಿದ್ದರೂ ಎಷ್ಟರ ಮಟ್ಟಿಗೆ ಅನಾಮಿಯರು ತಮಗೆ ಬೆಂಬಲಕೊಟ್ಟಾರೆಂಬುದರ ಬಗ್ಗೆ ನಿಶ್ಚಿತ ಜ್ಞಾನವಿಲ್ಲ. ಅವರು ತಮ್ಮ ಅನುಯಾಯಿಗಳನ್ನು ಒಕ್ಕಟ್ಟಿನಲ್ಲಿಡಲು ಅಶಕ್ತರಾದರೆ ಡಾ. ಹೋಚಿ ಮಿನ್ನರ ಪಕ್ಷದವರು ಮುಯ್ಯಿ ತೀರಿಸಿಕೊಳ್ಳುವ ಪ್ರಯತ್ನ ಮಾಡದಿರರೆಂಬುದು ಖಂಡಿತ. ಆದುದರಿಂದ ದಾಯಿಯವರು ಡಾ. ಹೋಚಿ ಮಿನ್ನರ ಶತ್ರುವೆಂದು ತಮ್ಮನ್ನು ಇತರರು ಕರೆಯದಂತೆ ಜಾಗ್ರತೆ ವಹಿಸಿದ್ದಲ್ಲದೆ ಅದೇ ಕಾಲದಲ್ಲಿ ಅನಾಮಿಗಳ ಮುಖಂಡತ್ವ ವಹಿಸಿ ಫ್ರೆಂಚರೊಡನೆ ಮಾತುಕತೆ ನಡೆಸಲು ಸಿದ್ಧರಾಗಿರುವದಾಗಿಯೂ ಪ್ರಕಟಿಸಿದ್ದಾರೆ. ಅವರು ಡಾ. ಹೋಚಿಮಿನ್ ಸರಕಾರದ ಸದಸ್ಯರಿದ್ದೂ ಫ್ರೆಂಚರೊಡನೆ ಮಾತುಕತೆಗೆಳೆಸಿದರು. ಫ್ರೆಂಚರು ಅವರ ಮೇಲೆ ಭರವಸೆಯಿಟ್ಟರು. ಆದರೆ ಇತ್ತೀಚಿನ ಫ್ರೆಂಚ ಸೂಚನೆಗಳ ತಿದ್ದುಪಡಿಯೆಂದು ಹೇಳಲಾದ ಅವರ–ಅನಾಮಿಗಳ ಸ್ವತಂತ್ರ ರಾಜತಂತ್ರ ಸಂಬಂಧ, ವೀಯಟನಾಮ ಸೈನ್ಯ, ನೌಕಾಬಲ, ವಿಮಾನದಲ ಮತ್ತು ಸಂಪೂರ್ಣ ಆರ್ಥಿಕ ಸ್ವಾತಂತ್ರ್ಯ–ಈ ಕೇಳಿಕೆಗಳು ವಸ್ತುತಃ ಫ್ರೆಂಚ ಸೂಚನೆಗಳ ತಿರಸ್ಕಾರವಾಗಿಯೇ ಪರಿಣಮಿಸಿವೆಯೆಂಬುದು ಸ್ಪಷ್ಟವಿದೆ. ಯಾವ ಈಶ ಹಾಗೂ ದಾಸ ರಾಷ್ಟ್ರಗಳಲ್ಲಿ ಮಾತುಕತೆ ನಡೆವಾಗಲೂ ಇದೇ ಪ್ರಕಾರ ಸಮಸ್ಯೆ ಉದ್ಭವಿಸುತ್ತದೆ. ಒಡೆಯನಿಗೆ ಒಕ್ಕಲನ್ನು ಹೊರೆವ ಶಕ್ತಿಯಿಲ್ಲದಿದ್ದರೂ ಅವನಿಗೆ ಹೆಚ್ಚಿನ ಹಕ್ಕನ್ನು ಬಿಟ್ಟುಕೊಡಲು ಒಪ್ಪನು. ಒಕ್ಕಲು ಕೇಳಿದ ಸವಲತ್ತು ಯಾವಾಗಲೂ ಒಡೆಯನ ಪಕ್ಕಿಗೆ ಮೃತ್ಯುವೆಂದೇ ಅವನು ತಿಳಿಯುತ್ತಾನೆ. ಸ್ವಾತಂತ್ರ್ಯವನ್ನು ದಾಸ ರಾಷ್ಟ್ರ ಕೇಳಿದರೆ ಈಶರಿಗೆ ತಲೆನೋವು ಉಂಟಾಗುತ್ತದೆ. ಇದೊಂದು ಸಮ್ರಾಟರ ಸುಪ್ರಸಿದ್ಧ ರೋಗ. ಬ್ರಿಟಿಶರನ್ನು ಕಂಡೂ ಫ್ರೆಂಚರು ಪಾಠ ಕಲಿಯದಿದ್ದರೆ ಕೊನೆಗೆ ತಮ್ಮ ಮೂರ್ಖತೆಗೆ ತಾವು ಪಶ್ಚಾತ್ತಾಪ ಪಡಬೇಕಾದ ಪ್ರಸಂಗ ಅವರಿಗುಂಟಾಗದಿರದು. ಇಂಡೋಚೀನವನ್ನು ವಂಚಿಸುವದೇ ಫ್ರೆಂಚರ ಗುರಿಯಾಗಿದ್ದರೆ ಬಹುಬೇಗ ಅವರ ಭ್ರಾಂತಿ ನಿರಾಸವಾಗದಿರದೆಂದು ಏಶಿಯದ ಜಾಗ್ರತ ರಾಷ್ಟ್ರಗಳು ಎಚ್ಚರಿಕೆ ಕೊಡದಿರವು.

## ಅಮೇರಿಕನ್ನರ ಅಜ್ಞಾನ

ಯುರೋಪಿನ ಪುನರ್ರಚನೆಗಾಗಿ ಸರಕಾರ ಕೊಡಬೇಕೆಂದಿರುವ ಸಹಾಯ ಸವಲತ್ತುಗಳ ಯೋಜನೆಗೆ ಅಮೇರಿಕನ್ ಜನತೆಯ ಬೆಂಬಲ ಪಡೆಯಲೆಂದು ಅಧ್ಯಕ್ಷ ಟ್ರೂಮನ್ನರು ಆರ್ಥಿಕ ಪ್ರಗತಿಯತ್ತ ಲಕ್ಷ್ಯ ಸೆಳೆದುದಕ್ಕೆ ಪ್ರತಿಯಾಗಿ ಉಂಟಾದ ಪ್ರತಿಕ್ರಿಯೆ ಅಷ್ಟೇನೂ ಆಶಾದಾಯಕವಾಗಿಲ್ಲೆಂದು ಹೇಳಲಾಗುತ್ತದೆ. ಅಟ್ಲಿಯವರು ಇಂಗ್ಲಂಡಿನ ಆರ್ಥಿಕ ಪುನರುಜ್ಜೀವನದ ಬಗ್ಗೆ ಕೊಟ್ಟ ಸೂಚನೆಗಳನ್ನು ಟೀಕಿಸುತ್ತ ಬಹಳ ಜನರು ಅಮೇರಿಕದಲ್ಲಿ—ಇದು ಇಂಗ್ಲಂಡಿನ ವ್ರತೋಪವಾಸದ ಹಾದಿಯೇ? ಈ ಯುರೋಪಿಯನ್ನರು ಸೊಂಟಕ್ಕೆ ಇನ್ನೂ ಬಿಗಿಯಾಗಿ ಒದ್ದೆಬಟ್ಟೆ ಕಟ್ಟಿಕೊಳ್ಳಬೇಕು. ಆಗ ಮಾತ್ರ ಇವರು ನಮ್ಮ ಸಹಾಯ ಪಡೆಯಲು ಅರ್ಹರಾಗುವರು—ಎಂದು ಹೇಳುವರೆಂದು ತಿಳಿಯುತ್ತದೆ.

ಸಾಮಾನ್ಯ ಅಮೇರಿಕನ್ನನಿಗೆ ಇಂಗ್ಲಂಡಿನ ವ್ರತೋಪವಾಸದ ಪರಿಚಯ ಸಾಕಷ್ಟಿಲ್ಲ; ಅಲ್ಲದೆ, ಅಮೇರಿಕದ ಸಂಪತ್ತಿಗೂ ಯುರೋಪಿಗೀಯುವ ಸಹಾಯಕ್ಕೂ ಇರುವ ಸಂಬಂಧವೇನೆಂಬುದು ಗೊತ್ತಿಲ್ಲ. ಆ ಉಂಡಾಡಿ ಭಟ್ಟನಿಗೆ ವರ್ಷವೊಂದಕ್ಕೆ ತಾನು ೭ ಕೋಟಿ ಬುಶೆಲ್ಲುಗಳಷ್ಟು ಧಾನ್ಯವನ್ನೂ ಅಸಂಖ್ಯಾಕ ಟನ್ನುಗಳಷ್ಟು ಆಹಾರವನ್ನೂ ಅಪವ್ಯಯ ಮಾಡುತ್ತಿರುವದರ ಅರಿವು ಎಳ್ಳಷ್ಟೂ ಇಲ್ಲವಾಗಿದೆ. ಕಾಲು ಮೇಲೆ ಕಾಲು ಹಾಕಿ ಕುಳಿತು ಸಂತ್ರಸ್ತ ಜಗತ್ತನ್ನು ಟೀಕಿಸುವ ಆಧುನಿಕ ಅಮೇರಿಕನ್ ಜನತೆ, ಇದೊಂದರಲ್ಲೇ ಅಲ್ಲ, ಇನ್ನೂ ಎಷ್ಟೋ ಪ್ರಮುಖ ಅಂತರಾಷ್ಟ್ರೀಯ ವಿಚಾರಗಳಲ್ಲಿ ಬಹಳ ಹಿಂದುಳಿದಿದೆ. ಬಂಡವಾಲಿಗರ ಹಸ್ತಕವಾದ ಪತ್ರಿಕೆಗಳ ಅಪಪ್ರಚಾರ, ಕೂಪ ಮಂಡೂಕ ಬುದ್ಧಿ, ಅದೂರದರ್ಶಿತ್ವ, ತಮ್ಮ ಉಂಡುಮಲಗುವ ಸೋಮಾರಿತನ ಇವುಗಳಿಂದ ಅಮೇರಿಕದ ಜನಸಾಮಾನ್ಯರು ಅಜ್ಞಾನ ಕೂಪದಲ್ಲಿ ಮುಳುಗಿದ್ದಾರೆ. ಅವರು ಕಣ್ಣುತೆರೆದು ವಿಷಯಜ್ಞಾನ ಮಾಡಿಕೊಂಡು ಸಹಾಯ ಯೋಜನೆಗಳಿಗೆ ಕಾಂಗ್ರೆಸ್ಸಿನ ಮೂಲಕ ಬೆಂಬಲವನ್ನು ಕೊಡದಿದ್ದರೆ ನಾಳೆ ಅವರು ಅಪರಿಹಾರ್ಯವಾದ ಜಾಗತಿಕ ಆರ್ಥಿಕ ಬಿಕ್ಕಟ್ಟಿನಲ್ಲಿ ಭಾಗಿಗಳಾಗಿ ನರಳಬೇಕಾದ ಪ್ರಸಂಗ ಉಂಟಾಗದಿರದು; ಅವರ ಅನ್ನಮಯ ಅರ್ಥವಾದಗಳು ಅವರನ್ನು ಸಂತೃಪ್ತ ಜೀವನದಿಂದ ಕೆಳಗುರುಳಿಸದಿರವು.

## ದಕ್ಷಿಣ ಆಫ್ರಿಕದ ಸಾಮಾನಿಗೆ ಬಹಿಷ್ಕಾರ

ಹಿಂದೀಯರ ಸಮಸ್ಯೆಯನ್ನು ದಕ್ಷಿಣ ಆಫ್ರಿಕದ ಒಕ್ಕೂಟ ಸರಕಾರವು ಸಂ. ರಾ. ಸಂಘದ ನಿರ್ಣಯದಂತೆ ಬಿಡಿಸದಿದ್ದರೆ ಇಡೀ ಜಗತ್ತು ಅಲ್ಲಿಯ ಸಾಮಾನುಗಳಿಗೆ ಬಹಿಷ್ಕಾರ ಹಾಕುವಂತೆ ಕೇಳಿಕೊಳ್ಳಬೇಕೆಂದು ಹಿಂದೀ ನಿಷ್ಕ್ರಿಯ ಪ್ರತೀಕಾರ ಸಮಿತಿಯವರು ತಮ್ಮ ಸಂ. ರಾ. ಸಂಘದ ಪ್ರತಿನಿಧಿಗಳಿಗೆ ಹೇಳಿರುವರಂತೆ. ಈ ಠರಾವು ಡಾ. ವೈ. ಎಂ. ದಾದೂರವರ ಅಧ್ಯಕ್ಷತೆಯಲ್ಲಿ ದರ್ಬಾನಿನಲ್ಲಿ ನಡೆದ ಒಂದು ಖಾಸಗಿ ಸಭೆಯಲ್ಲಿ ತೆಗೆದುಕೊಳ್ಳಲ್ಪಟ್ಟಿತು. ಪ್ರತೀಕಾರ ಸಮಿತಿಯ ನಾಯಕರಾದ ಡಾ. ದಾದೂರವರು ಒಂದು ಸಂದರ್ಶನದಲ್ಲಿ—ಆಫ್ರಿಕದಲ್ಲಿ ಉಂಟಾಗಬಹುದಾದ ಆರ್ಥಿಕ ಬಿಕ್ಕಟ್ಟನ್ನು ಪರಿಹರಿಸುವದರ ಸಲುವಾಗಿ ಸಂ. ರಾ. ಸಂಘದ ನಿರ್ಣಯವನ್ನು ಅಮಲಿನಲ್ಲಿ ತರಬೇಕೆಂದು ಸರಕಾರವನ್ನು ಒತ್ತಾಯಪಡಿಸಲೋಸುಗ ಮೇಲೆ ಹೇಳಿದಂತೆ ವಾಣಿಜ್ಯ ಬಹಿಷ್ಕಾರಾಸ್ತ್ರವನ್ನು ಪ್ರಯೋಗಿಸಬೇಕಾಯಿತೆಂದು ಹೇಳಿದರು. ಜಗತ್ತಿನ ಪ್ರಸಿದ್ಧ ಪ್ರತಿಗಾಮಿಗಳೆನಿಸಿದ ಸ್ಮಟ್ಸರು ಚರ್ಚಿಲ್ಲರಂತೆಯೇ ಹಿಂದೀಯರ ಅಹಿತಕ್ಕೇ ಕ್ರಮತೆಗೆದು ಕೊಳ್ಳುತ್ತ ನಡೆದರೆ ಜಗತ್ತಿನ ಸಹಾನುಭೂತಿ ಹಿಂದೀಯರ ಬಗ್ಗೆ ಹೆಚ್ಚುವದಲ್ಲದೆ ನ್ಯಾಯನಿಷ್ಠುರ ರಾಷ್ಟ್ರಗಳ ಬೆಂಬಲದಿಂದ ಸ್ಮಟ್ಸ ಸರಕಾರವೇ ಉರುಳಿ ಹೋಗುವ ಸಂಭವ ಉಂಟಾಗದಿರದು. ನೆಹರು ಸರಕಾರದ ಎಚ್ಚರಿಕೆಯನ್ನು ಕಡೆಗಣಿಸಿದ, ಆಫ್ರಿಕದ ಹಿಂದೀಯರ ಒಕ್ಕಟ್ಟನ್ನು ಒಡೆಯಲು ಕೂಡ ಪ್ರಯತ್ನಿಸಿ, ಸಂ. ರಾ. ಸಂಘದ ನಿರ್ಣಯವನ್ನು ಮೂಲೆಗೊತ್ತಿ ಸವರ್ಣ ಏಶಿಯೋ ಆಫ್ರಿಕನ್ ಕುಲವನ್ನೆ ಅಡಿಯಾಳಾಗಿಡಬಯಸುವ ಅನಾಗರಿಕ ಬುದ್ಧಿಯನ್ನು ಎಚ್ಚತ್ತ ಏಶಿಯ ಸಹಿಸದು. ಬಿಳಿಯರಿಗಿಂತ ಪ್ರಾಚೀನ ವಲಸೆಗಾರರಾದ ಹಿಂದೀಯರನ್ನು ತುಳಿದು ಶ್ವೇತಶಾಹಿಯನ್ನು ಜಗತ್ತಿನ ದಕ್ಷಿಣಾರ್ಧಗೋಲದಲ್ಲಿ ಕಟ್ಟಲು ಹವಣಿಸುವ ಸ್ಮಟ್ಸ ಚರ್ಚಿಲ್ಲರಂಥವರ ದುಷ್ಪ್ರಯತ್ನಕ್ಕೆ "ಮೂಲೇಕುಠಾರ:" ಎಂಬ ತತ್ವವನ್ನನ್ವಯಿಸುವುದು ಪ್ರಾಗತಿಕ ರಾಷ್ಟ್ರಗಳ ಇಂದಿನ ಆದ್ಯಕರ್ತವ್ಯವಾಗಿದೆ. ಆ ಪ್ರಕಾರ ದ. ಆಫ್ರಿಕದ ನಿಷ್ಕ್ರಿಯ ಪ್ರತೀಕಾರ ಸಮಿತಿಯ ಇಚ್ಛೆಯನ್ನು ಮನ್ನಿಸಿ ನ್ಯಾಯಪಕ್ಷಪಾತಿಗಳಾದ ರಾಷ್ಟ್ರಗಳು ದ. ಆಫ್ರಿಕದ ಒಕ್ಕೂಟ ಸರಕಾರದ ಮೇಲೆ ವಾಣಿಜ್ಯ ಬಹಿಷ್ಕಾರ ಹಾಕಿ ಅದಕ್ಕೆ ಬುದ್ಧಿಗಲಿಸಲು ನೆರವಾಗಬೇಕೆಂದು ಏಶಿಯದ ಹಿತೇಚ್ಛುಗಳು ಉತ್ಕಟವಾಗಿ ಹಾರೈಸುತ್ತಾರೆ.

## ಫ್ರಾನ್ಸಿನಲ್ಲಿ ನಕಲಿ ನೋಟುಗಳು

ಯುರೋಪಿನ ಡಾಲರ ದಾರಿದ್ರ್ಯ ನಿವಾರಣೆಗೆಂದು ಹಲ ಲಕ್ಷ ಕೃತಕ ನೋಟುಗಳನ್ನು ತಯಾರಿಸುತ್ತಿದ್ದುದು ಗೊತ್ತಾಗಿ ಮಾರ್ಸೇಲ್ಸ್ ಪಟ್ಟಣದಲ್ಲಿ ಆ ಸಂಬಂಧದಲ್ಲಿ ೧೨ ಜನರನ್ನು ಹಿಡಿದುದಾಗಿ ಸುದ್ದಿ ಬಂದಿದೆ. ಅಮೇರಿಕದ ಸಂಯುಕ್ತ ಸಂಸ್ಥಾನದ ಪೋಲೀಸರ ಸಹಾಯದಿಂದ ಫ್ರೆಂಚ ಪೋಲೀಸರು ಪಟ್ಟಣದಲ್ಲಿಯ ೩ ಮನೆಗಳನ್ನು ಝಡತಿ ಮಾಡಿದಾಗ ೪ ಅಚ್ಚಿನ ಯಂತ್ರಗಳು ದೊರೆತವು. ಇದಲ್ಲದೆ ೫೦ ಮತ್ತು ೧೦೦ ಡಾಲರುಗಳ ನೋಟುಗಳನ್ನು ೧೦ ಟನ್ನಿನ ಲಾರಿಯಲ್ಲಿ ಕಳುಹಲು ಯತ್ನಿಸುತ್ತಿರುವುದನ್ನೂ ಪೋಲೀಸರು ಪತ್ತೆ ಮಾಡಿದರು. ಆ ಲಾರಿಗಳಲ್ಲಿ ೨೦ ದೊಡ್ಡ ಬಂದೂಕುಗಳೂ ರಿವಾಲ್ವರುಗಳೂ ಮದ್ದೂ ಇದ್ದವೆಂದು ತಿಳಿಯಬಂದಿದೆ. ಸಂಯುಕ್ತ ಸಂಸ್ಥಾನದಲ್ಲೂ ಅಮೇರಿಕಾಕ್ರಾಂತ ಜರ್ಮನಿಯಲ್ಲೂ ಇತ್ತೀಚೆಗೆ ಹೆಚ್ಚಾದ ನಕಲಿ ನೋಟುಗಳ ಪ್ರಸಾರಕ್ಕೆ ಈ ಕಳ್ಳರ ಗುಂಪೇ ಕಾರಣವೆಂದು ಪೋಲೀಸರು ನಿರ್ಣಯಿಸಿದ್ದಾರೆ. ದಾರಿದ್ರ್ಯ ನಿವಾರಣೆಯ ಪ್ರಾಕೃತ ನಿಯಮವೆನಿಸಿದ "ಬೇಡು, ಸಾಲತೆಗೆ ಇಲ್ಲವೆ ಕಳು" ಎಂಬ ಗಾಥಾತತ್ವದಂತೆ ಯುರೋಪಿಯನ್ನರಿಂದು ನಡೆದುಕೊಳ್ಳುತ್ತಿರುವುದು ಅವರ ದುರವಸ್ಥೆಯನ್ನು ನಿಚ್ಚಳವಾಗಿ ಪ್ರತಿಬಿಂಬಿಸುತ್ತದೆ.

## ಬ್ರಹ್ಮೀ ಸರಕಾರದ ದೃಢನಿರ್ಧಾರ

ಹೊಸ ಬ್ರಹ್ಮೀ ಸರಕಾರದ ಮುಖ್ಯ ಪ್ರಧಾನರಾದ ಥಾಕಿನ್ ನೂರವರು ಕೊಲೆಗಾರಿಕೆಯ ವಿರುದ್ಧ ಅವಿಶ್ರಾಂತವಾಗಿ ಸಮರ ಹೂಡುವದಾಗಿ ಪ್ರಕಟಿಸಿದ್ದಾರೆ; ದೇಶದಲ್ಲಿ ಹರಡಿದ ಕ್ರೂರ ಕೃತ್ಯಗಳ ಬಿರುಗಾಳಿಯನ್ನು ತಡೆಯಲು ತಮ್ಮ ಸರಕಾರ ಎಲ್ಲ ಉಪಾಯಗಳನ್ನೂ ಕೈಕೊಳ್ಳುವುದಾಗಿ ಸಾರಿದರು.

ಇರಾವತಿಯ ನದೀಮುಖಜ ಭೂಮಿಯಲ್ಲಿ ತಿರುಗಾಡ ಹೋದಾಗ ಒಂದು ಸಾರ್ವಜನಿಕ ಸಭೆಯಲ್ಲಿ ಶ್ರೀ ಥಾಕಿನ್ ನೂರವರು, "ಬ್ರಹ್ಮೀಯರ ಇತಿಹಾಸದತ್ತ ನೋಡಿದರೆ ಕೊಲೆಗಳು ವಿರಳವೆಂದು ಕಂಡುಬರುವುದಿಲ್ಲ. ಕೊಲೆಗಡುಕರು ಬ್ರಹ್ಮೀದೇಶಭಕ್ತ ಪುಂಗವರನ್ನು ಎಷ್ಟೋ ಸಾರಿ ಬಲಿ ತೆಗೆದುಕೊಂಡಿದ್ದಾರೆ. ಎಷ್ಟೋ ಮುಖಂಡರು ಈ ಕೊಲೆಗಡುಕತನದ ವಿರುದ್ಧ ಹೋರಾಡಿ ಪ್ರಾಣಾರ್ಪಣ ಮಾಡಿದ್ದಾರೆ. ಈಗ ಬ್ರಹ್ಮೀಯರಾದ ನಾವು ದೃಢಪ್ರತಿಜ್ಞರಾಗಿ ಕ್ರಮ ತೆಗೆದುಕೊಳ್ಳದಿದ್ದರೆ ಸ್ವಾತಂತ್ರ್ಯ ಸಿಕ್ಕ ಕೆಲವೇ ಕಾಲದಲ್ಲಿ ಪುನಃ ದಾಸರಾಗಬೇಕಾಗುತ್ತದೆ." ಎಂದು ಹೇಳಿದರು.

ಜನರಲ್ ಆಂಗ್‌ಸೇನರ ಕ್ರೂರ ಕೊಲೆಗೆ ಸಂಬಂಧಿಸಿದ ಅನೇಕ ಕೃಷ್ಣಕಾರಸ್ಥಾನಗಳೀಗ ಹೊರಬಿದ್ದು ದುಷ್ಕರ್ಮಿಗಳನ್ನು ದಂಡಿಸುವ ಕೆಲಸವನ್ನು ಬ್ರಹ್ಮೀ ಸರಕಾರ ನಡೆಸುತ್ತಿರುವುದು ಸ್ತುತ್ಯವಾಗಿದೆ. ಹಿಂದುಸ್ತಾನದ ಹಿಂದು ಮುಸ್ಲಿಂ ಕಲಹದಂತೆ ಬ್ರಹ್ಮದೇಶದಲ್ಲಿ ರಾಜಕೀಯ ಪಕ್ಷಗಳ ತುಮುಲದಿಂದ ಭೀಕರವಾದ ಕೊಲೆ ಸುಲಿಗೆಗಳು ಪ್ರಾರಂಭವಾದುದನ್ನು ಜಗತ್ತೇ ಬಲ್ಲುದು. ಶೀಘ್ರದಲ್ಲಿ ಭರತಖಂಡದ ಸಾಮಂತ ರಾಜ್ಯಗಳಂತೆಯೇ ಸ್ವಾತಂತ್ರ್ಯ ಪಡೆಯಲಿರುವ ಬ್ರಹ್ಮೀಯರ ಪ್ರಾತಿನಿಧಿಕ ಸರಕಾರವಿಂದು ಕೊಲೆಗಡಿಕರ ವಿರುದ್ಧ ಮೇಲೆ ಹೇಳಿದಂತೆ ಘೋರ ಪ್ರತಿಜ್ಞೆಯಿಂದ ಕ್ರಮ ತೆಗೆದುಕೊಳ್ಳದಿದ್ದರೆ ಪರಿಸ್ಥಿತಿ ಕೈಮೀರಿ ಹೋಗಿ ಹಿಂದುಸ್ತಾನದ ಮೇಲೆ ಅಪಪ್ರಚಾರ ನಡೆಸಿದಂತೆ ಚರ್ಚಿಲ ಪ್ರಭೃತಿಗಳಿಗೆ ಬ್ರಹ್ಮದೇಶದ ಮೇಲೂ ನಾನಾ ವಿಧವಾದ ಆರೋಪ ಹೊರಿಸಲು ಅನು ದೊರೆತಂತಾಗುವುದು. ಹೊಸ ಮುಖ್ಯ ಮಂತ್ರಿಗಳು ಸಂದರ್ಭೋಚಿತವಾದ ಹೇಳಿಕೆ ಕೊಟ್ಟಿರುವುದು ಸ್ವಾಗತಾರ್ಹ. ಅದರಂತೆ ಬ್ರಹ್ಮೀ ಸರಕಾರ ನಡೆದುಕೊಂಡು ಮಾನವರನ್ನು ಬಲಿ ತೆಗೆದುಕೊಳ್ಳುವ ದಾನವ್ಯ ಲೀಲೆಯನ್ನು ಯಶಸ್ವಿಯಾಗಿ ತಡೆಗಟ್ಟಲು ಸಮರ್ಥವಾಗುವುದರಲ್ಲಿ ಸಂದೇಹಪಡಲು ಕಾರಣವಿಲ್ಲ.

## ಯೆಹೂದಿಗಳ ಕಾರಭಾರ

ಸುಮಾರು ೪೫೦ 'ಜನ ಯೆಹೂದಿಗಳು ೨ ಬ್ರಿಟಿಶ ವಿನಾಶಿಕೆಗಳ ರಕ್ಷಣೆ ಸಹಿತವಾಗಿ ೪ ಹಡಗುಗಳಲ್ಲಿ ಹೈಫಾದಲ್ಲಿ ಬಂದಿಳಿದರೆಂಬ ಸುದ್ದಿ ಬಂದಿದೆ. ಅವರನ್ನು ಸೈಪ್ರೆಸ್ಸಿಗೆ ಕಳುಹಲಾಗುತ್ತದೆಂದು ಧ್ವನಿವರ್ಧಕ ಯಂತ್ರದ ಮೂಲಕ ಹೇಳಲಾಯಿತು. ಮೇಜರ್ ಜನರಲ್ ಎಚ್ ಸಿ ಸ್ಟಾಕ್‌ವೆಲ್ಲರೇ ಸ್ವತಃ ಅವರು ಇಳಿಯುವುದನ್ನು ಮೇಲ್ವಿಚಾರಿಸಲು ನಿಂತಿದ್ದರು.

ಪ್ರಯಾಣಿಕರಿಂದ ಸುತ್ತಲ್ಪಟ್ಟ ಬ್ರಿಟಿಶ ನಾವಿಕನು ಗುಂಡುಹಾರಿಸಿದ್ದರಿಂದ ಯೆಹೂದಿಗಳಲ್ಲಿ ಒಬ್ಬನು ಸತ್ತನೆಂದೂ ಇಬ್ಬರಿಗೆ ಗಾಯವಾಯಿತೆಂದೂ ತಿಳಿದಿದೆ. ಅಗಲೇ ಪಾಲಿಸ್ತಾನದಿಂದ ಬ್ರಿಟಿಶರು ಕಾಲ್ತೆಗೆಯುವುದನ್ನು ಘೋಷಿಸಲಾಗಿತ್ತು. ಅಲ್ಲಿಯ ಸ್ವೀಡಿಶ್ ಪ್ರತಿನಿಧಿಯ ಕಾರ್ಯಾಲಯದೊಳಗೆ ಬಾಂಬು ಸಿಡಿದು ಒಳನುಗ್ಗಿತೆಂದೂ ಅದರಿಂದ ಹೆಚ್ಚಿನ ನಷ್ಟ ಸಂಭವಿಸಲಿಲ್ಲವೆಂದೂ ಹೇಳಲಾಗಿದೆ. ಯಹೂದಿಗಳ ಬಿಡುಗಡೆ ಕೂಟದ ಅಧ್ಯಕ್ಷನಾದ ಪೀಟರ್ ಬರ್ಗ್‌ಸನ್ನನು ಬ್ರಿಟಿಶರು ಪಾಲಿಸ್ತಾನವನ್ನು ಬಿಟ್ಟು ಹೋಗುವೆವೆಂದು ಸಾರಿದ್ದೊಂದು ತಂತ್ರವೆಂದೂ ಬಿಟ್ಟುಹೋದನಂತರ ಪಾಲಿಸ್ತಾನದಮೇಲೇರಿಹೋಗಲು ಅವರು ಅರಬೀ ಸೈನ್ಯವನ್ನು ತರಬೇತುಮಾಡುತ್ತಿರುವರೆಂದೂ ಹೇಳಿಕೆಕೊಟ್ಟಿರುವುದಾಗಿ ಪ್ಯಾರಿಸಿನಲ್ಲಿ ಪ್ರಕಟವಾಗಿದೆಯೆಂದು ರಾಯಟರ ಸುದ್ದಿಗಾರನಿಂದ ತಿಳಿದು ಬರುತ್ತದೆ. ಈ ಸಂದರ್ಭದಲ್ಲಿ ಸಂಯುಕ್ತ ರಾಷ್ಟ್ರ ಸಂಘದ ಹೊಣೆ ಅತ್ಯಂತ ಹೆಚ್ಚಿನದಾಗಿದೆ. ಅದು ಅಡ್ಡಗೋಡೆಯಮೇಲಿನ ದೀಪದಂತೆ ಅನಾಸ್ಥೆಯಿಂದ ಅನಿರ್ದಿಷ್ಟ, ಅಸ್ಪಷ್ಟ ಧೋರಣ ತಳೆದರೆ ಪಾಲಿಸ್ತಾನದ ಪರಿಸ್ಥಿತಿ ತಿದ್ದಲಾರದಷ್ಟು ಕೆಟ್ಟು ಹೋಗಬಹುದಾಗಿದೆ. ಅಗಲೇ ಯೆಹೂದಿ ಕ್ರಾಂತಿಕಾರರು ಮನಸ್ವಿಯಾಗಿ ಅನಾಹುತಗಳೆಸಗಿದ್ದಾರೆ. ಅದರಿಂದ ಅಲ್ಲಿ ವ್ಯವಸ್ಥಿತ ಜೀವನ ನಡೆಯುವುದೇ ಅಸಾಧ್ಯವಾಗಿ ಹೋಗಿದೆ. ಆದುದರಿಂದ ಸಂ. ರಾ. ಸಂಘವು ನಿರ್ದಿಷ್ಟ ನಿರ್ಣಯವಿತ್ತು ಅದನ್ನು ಆಚರಣೆಯಲ್ಲಿ ತರಲು ಕ್ರಮ ತೆಗೆದುಕೊಳ್ಳಬೇಕೆಂದು ಆಗ್ರಹ ಪೂರ್ವಕ ಹೇಳಬೇಕಾಗಿದೆ.

## ಅಂತರ್ರಾಷ್ಟ್ರೀಯ ಆಹಾರ ಸಮಿತಿ

ಜೇನಿವಾದಲ್ಲಿ ಅಗಸ್ಟ ೨೫ ರಿಂದ ಸಪ್ಟೆಂಬರ ೧೨ ರವರೆಗೆ ಜರುಗಿದ ಅಂತರ್ರಾಷ್ಟ್ರೀಯ ಆಹಾರ ಮತ್ತು ಒಕ್ಕಲುತನದ ಸಮಿತಿಯ ೩ ನೆಯ ಅಧಿವೇಶನದಲ್ಲಿ ಭಾರತದ ಪ್ರತಿನಿಧಿ ಮಂಡಲವು ಪ್ರಮುಖ ಪಾತ್ರವಹಿಸಿತೆಂದು ತಿಳಿಯುತ್ತದೆ. ಮೊದಲು ಕೂಡಿದನಂತರ ಸಮಿತಿಯ ಪರಿಷತ್ತು ಮೂರು ಉಪಸಮಿತಿಗಳನ್ನು ನೇಮಕಮಾಡಿ ತನ್ಮೂಲಕ ಕೆಲಸ ಸಾಗಿಸಿತು. ಪ್ರಪಂಚ ಆಹಾರ ಸಮಿತಿಯ ಘಟನೆ, ಪ್ರಾದೇಶಿಕ ಕಾರ್ಯಾಲಯಗಳ ಸ್ಥಾಪನೆ, ಅಂತರ್ರಾಷ್ಟ್ರೀಯ ಸಂಕಟಕಾಲಿಕ ಆಹಾರ ಸಮಿತಿಯು ಕಾರ್ಯಭಾರವಹಿಸಿ ಕೊಳ್ಳುವುದು ಇವೇ ಮುಖ್ಯವಾಗಿ ಚರ್ಚಿಸಲ್ಪಟ್ಟ ವಿಷಯಗಳು.

ಪ್ರಪಂಚ ಆಹಾರ ಸಮಿತಿ ರಚಿತವಾದರೆ, ಸರಕಾರದ ಸಾಮರ್ಥ್ಯವುಳ್ಳ ಪ್ರಾತಿನಿಧಿಕ ಸಂಸ್ಥೆಯಾಗಿ ಅದು ವಾರ್ಷಿಕ ಸಭೆಯ ನಿರ್ಣಯಗಳನ್ನು ಅಮಲಿನಲ್ಲಿ ತರಲು ಶಕ್ತವಾಗುವುದಲ್ಲದೆ, ಎರಡು ಸಭೆಗಳ ಮಧ್ಯಕಾಲದಲ್ಲಿ ತಾತ್ಪೂರ್ತಿಕ ನಿರ್ಣಯಕೊಡುವ ಗೌರವ ಹಾಗೂ ಅಧಿಕಾರಗಳಿಂದ ಆಯಾ ಸಂದರ್ಭದಲ್ಲಿ ಅಗತ್ಯವಾದ ಕಾರ್ಯನಡೆಸಲು ಅನುಕೂಲವಾಗುತ್ತದೆಂದು ಸಭೆ ಅಭಿಪ್ರಾಯಪಟ್ಟಿತು. ಮೇಲಿನಂತೆ ಸಮಿತಿಯು ಅಧಿಕೃತವಾಗದಿದ್ದರೆ ಅದು ಕೇವಲ ಅಪ್ರಯೋಜಕವಾಗಿ ಉಳಿಯುವುದೆಂದು ಭಾರತದ ಪ್ರತಿನಿಧಿಗಳು ಖಂಡಿತೋಕ್ತಿಯಿಂದ ಸಮರ್ಥಿಸಿದರು.

ಏಶಿಯ, ಮಧ್ಯಪೂರ್ವ. ಆಫ್ರಿಕ ಅಮೇರಿಕ ಮುಂತಾದ ಪ್ರದೇಶಗಳಲ್ಲಿ, ಅಲ್ಲಿಯವೇ ಆದ ವಿಲಕ್ಷಣ ಪ್ರಶ್ನೆಗಳಿರುವುದರಿಂದ ಸಮರ್ಥವಾಗಿ ಆಹಾರ ಸಮಿತಿ ಕೆಲಸ ಮಾಡಬೇಕಾದರೆ ಅಲ್ಲಲ್ಲಿ ಪ್ರಾದೇಶಿಕ ಕಾರ್ಯಾಲಯಗಳನ್ನು ಸ್ಥಾಪಿಸುವುದು ಅವಶ್ಯವೆಂದು ಸಭೆಗೆ ಕಂಡುಬಂದಿತು.

ಮತ್ತೊಂದು ಬಹು ಮುಖ್ಯವಾದ ವಿಷಯವೆಂದರೆ, ಆಗ್ನೇಯ ಏಶಿಯದಲ್ಲಿ ಸರಕಾರೀ ಸಂಬಂಧದೊಡನೆ ಅಕ್ಕಿಯ ಪೂರವಣಿಕೆಯ ಬಗ್ಗೆ ಒಂದು ಪರಿಷತ್ತನ್ನು ಕೂಡಿಸಬೇಕೆಂಬುದು. ಇದರಮೇಲೂ ಚರ್ಚೆನಡೆಯಿತು. ಮೇಲಿನ ಪರಿಷತ್ತನ್ನು ಕರೆದಾಗ ಅದು ಕಳೆದ ಮೀಟಿಂಗಳಲ್ಲಿ ತಿರುವಾಂಕೂರಿನಲ್ಲಿ ಕೂಡಿದ ತಂಡುಲ ಪರೀಕ್ಷಾ ಸಮಿತಿಯ ವರದಿಯನ್ನು ಪರಿಶೀಲಿಸಿ ತಕ್ಕ ಶಿಫಾರಸು ಮಾಡತಕ್ಕದ್ದೆಂದು ಸಭೆ ನಿರ್ಣಯಿಸಿತು.

## ಜಪಾನು ಮತ್ತು ಭರತಖಂಡಗಳ ನಡುವೆ ವ್ಯಾಪಾರ ಪ್ರಾರಂಭ

ಈಗ, ೭ ವರ್ಷಗಳ ನಂತರ ಜಪಾನು ಮತ್ತು ಭರತಖಂಡಗಳ ನಡುವೆ ಪುನಃ ವ್ಯಾಪಾರ ವ್ಯವಹಾರ ಪ್ರಾರಂಭವಾಗಿದೆ. ೩೦ ಸಾವಿರ ಹತ್ತಿಯ ಮೂಟೆಗಳನ್ನು ಮೊನ್ನೆ ಮೊನ್ನೆ ಕರಾಚಿಯಿಂದ ಜಪಾನಿಗೆ ಕಳುಹಲಾಯಿತು. ಹಿಂದುಸ್ತಾನದಿಂದ ೬ ಹಡಗಗಳು ೧ ಲಕ್ಷ ೭೦ ಸಾವಿರ ಹತ್ತಿಯ ಮೂಟೆಗಳನ್ನು ಜಪಾನಿಗೆ ಸಾಗಿಸಿ ಅಲ್ಲಿಂದ ೮ ಕೋಟಿ ಗಜ ಜಪಾನೀ ರೇಶಿಮೆಯನ್ನು ಹೇರಿಕೊಂಡು ಬರಲಿವೆಯೆಂದು ತಿಳಿಯುತ್ತದೆ. ಒಕ್ಟೋಬರ ೧೦ ಕ್ಕೆ ಜಪಾನಿಗೆ ಹೊಟ್ಟ ಮೊದಲನೆಯದಾಗಿ ಹೋಗುವ ಹಿಂದೀ ನೌಕೆಯಾದ ಸಿಂಧ್ಯ ಕಂಪನಿಯ "ಜಲದೂತ" ವು ೩೦ ಸಾವಿರ ಹತ್ತಿಯ ಮೂಟೆಗಳನ್ನು ತುಂಬಿಕೊಂಡು ಮುಂಬಯಿಯಿಂದ ಹೊರಡಲಿದೆ. ಅಂತೂ ಕೊನೆಗೆ ಶತ್ರುರಾಷ್ಟ್ರವೆಂದೆನಿಸಿದ ಜಪಾನು ಶಾಂತ ಪರಿಸ್ಥಿತಿಗೆ ಬಂದು ಮುಟ್ಟಿ ಯಥಾಪೂರ್ವ ಭರತಖಂಡದೊಡನೆ ವ್ಯಾಪಾರಾದಿ ವ್ಯವಹಾರಕ್ಕೆ ಪ್ರಾರಂಭಿಸಿತೆಂಬುದು ಅಭಿನಂದನೀಯವಾಗಿದೆ.

ಮೊದಲಿನಿಂದಲೂ ಕಲಾಕುಶಲತೆಯಲ್ಲಿ ಹೆಸರಾದ ಜಪಾನಿಗಳು ಯುದ್ಧದ ಹಾವಳಿಗೆ ತುತ್ತಾಗಿ [illegible] ಘೋರ ಕಷ್ಟ ನಷ್ಟಗಳಿಗೊಳಗಾದರೂ [illegible] ಬೇಗ ಚೇತರಿಸಿಕೊಂಡು ಕೈಗಾರಿಕೆಯಲ್ಲಿ [illegible] ಯಿಟ್ಟಿರುವುದು [illegible] ರಾಷ್ಟ್ರ [illegible] ಪಾಠವಾಗಿದೆ.

ಸಿ. ಕೇ. [illegible]

# ವಿಭೂತಿಪುರುಷ ಗಾಂಧೀಜಿ

ಜಗತ್ತಿನ ಯಾವುದಾದರೊಂದು ವಸ್ತು ಅಥವಾ ಪ್ರಾಣಿ, ಮನುಷ್ಯ ಇವರಲ್ಲಿ ಒಂದು ವಿಶಿಷ್ಟವಾದ ವಿಭೂತಿ ಅಂದರೆ ಕಾಂತಿ, ಕ್ರಿಯಾಶಕ್ತಿ, ಸಾಹಸಗಳು ಇದ್ದರೆ, ಕಾಣಬಂದರೆ ಅವೆಲ್ಲವೂ ತನ್ನ ಅಂಶದಿಂದ ಜನಿಸಿವೆ ಎಂದು ಗೀತಾಚಾರ್ಯನು ಹೇಳಿರುವನು. ಕಾಂತಿ, ಕ್ರಿಯಾಶಕ್ತಿ, ಸಾಹಸಗಳು ಯಾರಲ್ಲಿ ಹೆಚ್ಚು ಹೆಚ್ಚಾಗಿ ಇರುವುವೊ, ಕಾಣುವುವೊ, ಅವರಲ್ಲಿ ಪರಮಾತ್ಮನ ಅಂಶವು ಹೆಚ್ಚು ಹೆಚ್ಚು ಇರುವುದೆಂದು ತಾತ್ಪರ್ಯ. ಅಂಥವರನ್ನು ವಿಭೂತಿ ಪುರುಷರೆಂದು ಜಗತ್ತು ಕರೆಯುತ್ತದೆ. ಅಂಥವನು ಇದ್ದಾನೆಯೇ ?, ಕಂಡರೆ ಯಾರನ್ನು, ಇದ್ದರೆ ಯಾರನ್ನು ಇಂದು ನಾವು ವಿಭೂತಿ ಪುರುಷನೆಂದು ಕರೆಯಬಹುದು?

ಯಾವ ಕಾಲದಲ್ಲಿ ಧರ್ಮದ ಅವನತಿಯೂ, ಅಧರ್ಮದ ಉನ್ನತಿಯೂ ಆಗುತ್ತದೆಯೋ ಆ ಸಮಯದಲ್ಲಿ ತಾನು ಜನ್ಮ ತಾಳುತ್ತೇನೆಂದು ಗೀತಾಚಾರ್ಯನು ಹೇಳುತ್ತಾನೆ. ಇಂಥ ಸಮಯದಲ್ಲಿ ದೇಶದ ಉದ್ಧಾರಕ್ಕಾಗಿ, ಸಮಾಜವನ್ನು ಚೇತನಗೊಳಿಸಲು ವಿಭೂತಿ ಪುರುಷನು ಜನ್ಮ ತಾಳುತ್ತಾರೆ. ಇದು ಎಲ್ಲ ವಿಭೂತಿ ಪುರುಷರ ಕಾಲಕ್ಕೂ ಕಾಣಬರುತ್ತದೆ. ಹಿಂದೆ ಆಗಿಹೋದ ರಾಮಕೃಷ್ಣ, ಬುದ್ಧ, ಶಂಕರ ಮೊದಲಾದ ವಿಭೂತಿ ಪುರುಷರ ಅವತಾರ ಕಾಲದಲ್ಲಿ ನಮ್ಮ ಭಾರತದೇಶದಲ್ಲಿ, ಸಮಾಜದಲ್ಲಿ ಇಂತಹ ಪರಿಸ್ಥಿತಿಯೇ ಇದ್ದಿತೆಂಬುದನ್ನು ಇತಿಹಾಸ ತಿಳಿಸುತ್ತದೆ.

## ಹಿಂದಿನ ಪರಿಸ್ಥಿತಿ

ಸುಮಾರು ಎಪ್ಪತ್ತೈದು ವರ್ಷಗಳ ಹಿಂದೆ ನಮ್ಮ ಭಾರತವು ಅರಾಜಕ ಸ್ಥಿತಿಯಲ್ಲಿದ್ದಿತು. ಅನೇಕ ಸಾವಿರ ವರ್ಷಗಳಿಂದ ಸ್ವಾತಂತ್ರ್ಯ, ಸುಖ, ಸಂತೋಷಗಳಿಂದ ಇದ್ದ ಭಾರತವು, ಸಂಪತ್ತಿನ ವೈಭವದಿಂದ ಮೆರೆದ ಭಾರತವು, ಉಚ್ಚ ಸಂಸ್ಕೃತಿ, ಧರ್ಮ, ಪರೋಪಕಾರ, ಸಹಕಾರ, ತತ್ವಜ್ಞಾನಗಳಿಂದ ಜಗತ್ತಿನಲ್ಲಿಯೇ ಮೊದಲಿನ ಸ್ಥಾನವನ್ನು ಪಡೆದ ಭಾರತವು ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ಬಂದ ಮುಸ್ಲಿಮರ ದಾಳಿಯಿಂದ ಹಿಂಸೆಯಿಂದ, ರಾಕ್ಷಸೀ ವೃತ್ತಿಯಿಂದ ತುಂಬು ಪಾಳೆಯಗಳಾಗಿ ಆತ್ಮರಕ್ಷಣೆಯ ಜವಾಬ್ದಾರಿಯು ಭಾರತದ ಜನಾಂಗಕ್ಕೆ ಬಹಳವಾಗಿ ಬಿದ್ದಿತು. ಅದರಿಂದ ಧರ್ಮ, ಸಂಪತ್ತುಗಳ ಗಳಿಕೆಯು, ಜ್ಞಾನದ ಪಿಪಾಸೆಯು ಕಡಿಮೆಯಾಗುತ್ತ ಬಂದಿತ್ತು. ಅಂತಹ ಸಮಯದಲ್ಲಿ ತಕ್ಕಡಿಯನ್ನು ಹಿಡಿದುಕೊಂಡು ವ್ಯಾಪಾರಕ್ಕಾಗಿ ಬಂದ ಆಂಗ್ಲೇಯರು ೧೫೦ ವರ್ಷಗಳ ಹಿಂದೆ ಭಾರತವನ್ನು ಆಳಹತ್ತಿದರು. ತಮ್ಮ ಉಪಾಯಗಳಿಂದ ಭಾರತೀಯರು ಮತ್ತಷ್ಟು ಅಜ್ಞಾನಿಗಳೂ ದರಿದ್ರರೂ ದ್ವೇಷಾಸೂಯಪರರೂ ಆಗುವಂತೆ ಮಾಡಿ ಆಳರಸರು ತಾವೇ ಬುದ್ಧಿವಂತರೆಂದು ಹೆಮ್ಮೆ ಬಡುತ್ತಿದ್ದರು. ಇದರಿಂದ ಭಾರತವು ನಿಸ್ತೇಜವಾಗಿತ್ತು. ಧರ್ಮಗ್ಲಾನಿಹೊಂದಿತ್ತು. ಅಧರ್ಮ ಅಸೂಯೆಗಳ ನೆಲೆವೀಡಾಗಿತ್ತು. ಸಮಾಜ ಜೀವನವು ಅತಿಯಾಗಿ ಕೆಟ್ಟಿತ್ತು. ಜನರು ಅಜ್ಞಾನದಿಂದ ತಮ್ಮ ಸುಖ ದುಃಖಗಳು ಯಾವುವೆಂಬ ಪರಿವೆಯಿಲ್ಲದಷ್ಟು ಮಂಕಾಗಿದ್ದರು. ಆಳರಸರು ಸಾಮ್ರಾಜ್ಯ ಪಿಪಾಸೆಯಿಂದ ರಾಕ್ಷಸೀ ವೃತ್ತಿಯನ್ನವಲಂಬಿಸಿ ಪ್ರಜೆಗಳ ರಕ್ತಹೀರಿ ಹಿಪ್ಪೆಮಾಡಿದ್ದರು. ಇಂತಹ ಸಮಯದಲ್ಲಿ ಒಬ್ಬ ವಿಭೂತಿ ಪುರುಷನು ಭಾರತಕ್ಕೆ ಸಿಗದಿದ್ದರೆ, ಹುಟ್ಟದಿದ್ದರೆ ಇಂದಿಗೆ, ಸ್ವಾತಂತ್ರ್ಯವು ಲಭಿಸುವ ದಿನದೊಳಗೆ ಭಾರತದ ಸ್ಥಿತಿಯು ಏನಾಗುತ್ತಿತ್ತೋ? ಅದನ್ನು ಊಹಿಸುವದೂ ಹೇಳುವದೂ ಕಷ್ಟ—ಭೀಕರವೆನಿಸುತ್ತದೆ! ಅಂಥ ಸಮಯಕ್ಕೆ ಸರಿಯಾಗಿ ಬ್ಯಾರಿಸ್ಟರಾಗಿ ಬಂದ ಗಾಂಧೀಜಿಯು ವಕೀಲವೃತ್ತಿಯನ್ನವಲಂಬಿಸಿ ಹಣಗಳಿಸಬೇಕು, ಸುಖ ಜೀವನ ನಡೆಸಬೇಕು, ಎಂದು ಯೋಚಿಸಿದ್ದರೆ ಅವನಿಗೆ ಯಾವಕೊರತೆಯೂ ಬರುತ್ತಿರಲಿಲ್ಲ. ಆದರೆ ಈಶ್ವರನ ಸಂಕೇತವು ಬೇರೆಯೇ ಇದ್ದಿತು. ಭಾರತವು ಪರದಾಸ್ಯದಿಂದ ಬಿಡುಗಡೆ ಹೊಂದಬೇಕೆಂದು ಅವತಾರ ಪುರುಷನು ಕಾರ್ಯಾರಂಭ ಮಾಡುವದಕ್ಕೆ ಮುಂಚೆ ಇರಬೇಕಾದ ಕಾರ್ಯ ಸಿದ್ಧತೆಯು ಆಗಿದ್ದಿತು. ಪ್ರತಿಪಕ್ಷದವರ ದೌರ್ಜನ್ಯವು ಪರಮಾವಧಿಗೆ ಮುಟ್ಟಿದ್ದಿತು. ಅದರ ಪ್ರತೀಕಾರದ ಇಚ್ಛೆಯು ಜನತೆಯಲ್ಲಿ ಮೊಳಕೆಯಾಗಿದ್ದಿತು. ದಾದಾಬಾಯಿ ನವರೋಜಿ, ತಿಲಕ, ಗೋಖಲೆ ಮೊದಲಾದವರು ಮೊಳಕೆಗೆ ಗೊಬ್ಬರ[illegible]ನು ಹಾಕಿ ಬೆಳೆಸುತ್ತಿದ್ದರು. ಇಂತಹ ಸಮ[illegible]ಸರಿಯಾಗಿ ಗಾಂಧೀಜಿಯು ತನ್ನ ಜನ್ಮದ ಮು[illegible]ಶವನ್ನು ನೆನೆದು ತಾನು ಮಾಡಲೇ[illegible] ನಮ್ಮ [illegible]ರ್ಯದ ಕಡೆಗೆ ಲಕ್ಷ್ಯಗೊಟ್ಟು [illegible]ಕೀಲಿಯ[illegible] ಲೊಃಕಸೇವೆ ಮಾಡು[illegible]ಮುಕ್ತಿಲಿನ ರಾಜ[illegible]ಡಕ್ಕಾಗಿ ನಿಷ್ಕಾಮಕರ್ಮ ಮಾಡುವುದು ಎಲ್ಲದಕ್ಕೂ ಶ್ರೇಷ್ಠವು. ಪರದಾಸ್ಯದಿಂದ ತೊಳಲುತ್ತಿರುವ ದೇಶದ ಜನರನ್ನು ಯಾವುದಾದರೊಂದು ಉಪಾಯದಿಂದ ಉದ್ಧರಿಸಬೇಕು ಎಂದು ನಿಶ್ಚಯಿಸಿದನು.

## ಸತ್ಯಾಗ್ರಹ ದರ್ಶನ

ಗಾಂಧೀಜಿಯು ಒಂದು ಹೊಸ ದರ್ಶನವನ್ನು ಕಂಡು ಹಿಡಿದ ರಸಋಷಿಯೆಂದು ಹೇಳ

ಲೇ:— ರಾ. ಭ. ಪಾಸಣಗಿ

ಬಹುದು. ಭಾರತದ ಸ್ವಾತಂತ್ರ್ಯ ಸಿದ್ಧಿಗಾಗಿ ಹುಡುಕಿ ಶೋಧಿಸಿದ ಸಾಧನೆಯೇ ಆದರ್ಶನದ ಪ್ರಯೋಗನಾದ ಸತ್ಯಾಗ್ರಹವು. ಹಿಂದೆ ಯಾರು ಇದನ್ನು ಕಂಡಿದ್ದರೋ, ಇಲ್ಲವೋ, ಅದರ ಪ್ರಯೋಗವಂತೂ ಎಲ್ಲಿಯೂ ಸ್ಪಷ್ಟವಾಗಿ ಕಾಣುವದಿಲ್ಲ. ಹಿಂದೆ ಪ್ರಾಯೋಪವೇಶಮಾಡುತ್ತಿದ್ದರೆಂದು ರಾಮಾಯಣದಿಂದ ತಿಳಿದು ಬರುತ್ತದೆ. ರಾಮಾಯಣದ ಪ್ರಾಯೋಪವೇಶನವು "ದಕ್ಷಿಣಕ್ಕೆ ತುದಿಯಿರುವಂತೆ ದರ್ಭಾಸನವನ್ನು ಹಾಕಿ ಅದರ ಮೇಲೆ ಪೂರ್ವಕ್ಕೆ ಮುಖಮಾಡಿ ಕುಳಿತು ಆಮರಣಾಂತಉಪವಾಸಮಾಡಿ ದೇಹಬಿಡುವುದು" ಎಂಬ ಅರ್ಥವನ್ನು ಕೊಡುತ್ತದೆ. ಆದರೆ ಅದನ್ನು ಕಾಲದ ಪರಿಮಿತಿಯಿಂದ, ಅವಧಿಯಿಂದ ಮಾಡುವ ಪದ್ಧತಿಯೂ ಇದ್ದಿತೆಂದು ತೋರುತ್ತದೆ. ಆದರೆ ಹಿಂದೆ ತ್ರೇತಾಯುಗದಲ್ಲಿ ಕ್ವಚಿತ್ತಾಗಿ ಕಂಡು ಬಂದ ಪ್ರಾಯೋಪವೇಶವನ್ನು ಕಲಿಯುಗವೆಂದು ಹೇಳುವ ಇಂದಿನ ದಿನದಲ್ಲಿ ಅದಕ್ಕೆ ಒಂದು ವಿಶಿಷ್ಟ ರೂಪಕೊಟ್ಟು ಜನತೆಗೆ ತಿಳಿಸಿ ತಾವೂ ಆಚರಿಸಿ ಅದರ ಸತ್ವವನ್ನು ಜಗತ್ತಿಗೆ ತೋರಿಸಿಕೊಡುವುದು ವಿಭೂತಿ ಪುರುಷರಿಂದಲ್ಲದೇ ಬೇರೆಯವರಿಂದ ಸಾಧ್ಯವಾಗಲಾರದು.

ಸತ್ಯಾಗ್ರಹದ ದರ್ಶನವನ್ನು ಗಾಂಧೀಜಿ ಜನತೆಯ ಮುಂದೆ ಇಟ್ಟನು. ಅದರ ಪ್ರಯೋಗ ಶಾಲೆಯಲ್ಲಿ ಅನೇಕ ಜನರನ್ನು ಸೇರಿಸಿಕೊಂಡನು. ಅವನು ಕೆಲಸ ಮಾಡುತ್ತ ಪ್ರಯೋಗ ಶಾಲೆಯಲ್ಲಿ ದರ್ಶನದ ಆಳವಾದ ಮಹತ್ವವನ್ನು ಕಂಡನು. ಅದರ ಸರಿಯಾದ ಅರ್ಥವನ್ನು ಗ್ರಹಿಸಿದನು. ಸತ್ಯಕ್ಕಾಗಿ ಹಿಡಿಯುವ ಹಟವು ಯಾರು ಬೇಕಾದರೂ ಯಾವಾಗಬೇಕಾದರೂ ಹಿಡಿಯತಕ್ಕದ್ದಲ್ಲ. ಅದನ್ನು ಸತ್ಯವನ್ನು ಕಂಡು ಹಿಡಿದವನು ಮಾತ್ರ ಆಚರಿಸತಕ್ಕದ್ದು. ಒಬ್ಬನು ಅಸತ್ಯ ಅನ್ಯಾಯಗಳಲ್ಲಿ ಪ್ರವೃತ್ತನಾಗಿದ್ದರೆ ಅವನನ್ನು ತಿದ್ದಲು ಅವನಿಗೆ ಸತ್ಯದ ಬೆಳಕನ್ನು ತೋರಿಸಲು ಸತ್ಯವನ್ನು ಕಂಡು ಹಿಡಿದವನು ಮಾತ್ರ ಸತ್ಯಾಗ್ರಹವನ್ನು ಆಚರಿಸಬೇಕು.

## ಅಹಿಂಸೆಯ ಮಹತ್ವ

ಮಾನವ ಧರ್ಮವಾದ ಅಹಿಂಸೆ, ಸತ್ಯ, ಅಕ್ರೋಧ, ಶೌಚ, ಇಂದ್ರಿಯನಿಗ್ರಹವೆಂಬ ಐದು ಪ್ರಧಾನ ಅಂಗಗಳೊಳಗೆ ಗಾಂಧೀಜಿ ಅಹಿಂಸೆಗೆ ಮೊದಲನೆ ಸ್ಥಾನವನ್ನು ಕೊಟ್ಟಿದ್ದಾನೆ. ವೇದ, ಉಪನಿಷತ್ತು, ಗೀತೆ, ಸ್ಮೃತಿ, ಪುರಾಣಗಳಲ್ಲಿಯೂ ಇದಕ್ಕೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ. ವೇದಕಾಲದಿಂದ ಬಂದ ಧರ್ಮವು ಬಿಲವಾಗುತ್ತಿರುವುದನ್ನು ನಿಲ್ಲಿಸಿ ಅದನ್ನು ಉದ್ಧರಿಸಲು ಇಂದಿಗೆ ಸುಮಾರು ಎರಡೂವರೆ ಸಾವಿರ ವರ್ಷಗಳ ಹಿಂದೆ ಬುದ್ಧನು ಅವತರಿಸಿದನು. ರಾಜಕುಮಾರನಾದ ಬುದ್ಧನು ರಾಜ್ಯಪದವಿಯನ್ನು ಬಿಟ್ಟು ಅಡವಿಗೆ ಹೋದನು. ಅಲ್ಲಿ ಅನೇಕ ವರ್ಷ ಸತ್ಯಾನ್ವೇಷಣೆ ಮಾಡುತ್ತ ಕೊನೆಗೆ ಸತ್ಯದ ಅನುಭವವನ್ನು ಪಡೆದನು. ಮಾನವ ಜೀವನದಲ್ಲಿ ಇಹಪರಗಳೆರಡರ ಸುಖಕ್ಕೂ ಅಹಿಂಸೆಯೇ ಪರಮಸಾಧನವೆಂದು ಜಗತ್ತಿಗೆ ಮತ್ತೊಮ್ಮೆ ಸಾರಿದನು. ಅದನ್ನು ಪ್ರಚಾರ ಮಾಡಿದನು. ಆದರೆ ಇಂದು ಗಾಂಧೀಜಿಯು ನಮ್ಮೆದುರಿಗೆ ಇದ್ದು, ನಮ್ಮೊಂದಿಗೆ ಬೆರೆತು, ನಮಗೆ ಮುಂದಾಳಾಗಿ ಅಹಿಂಸೆಯ ಮಹತ್ವವನ್ನು ತೋರಿಸಿಕೊಟ್ಟನು. ನಮಗೆ, ಭಾರತೀಯರಿಗೆ, ಪ್ರಪಂಚಕ್ಕೇ ಅಹಿಂಸೆಯ ಮಹತ್ವ ತಿಳಿಯುವಂತಾಯಿತು.

## ಸ್ಥಿತ ಪ್ರಜ್ಞತೆ

ಗಾಂಧೀಜಿಯು ರಾಜಕೀಯದಲ್ಲಿ, ಸಮಾಜ ಜೀವನದಲ್ಲಿ, ಮನೆಯ ಬಾಳಿನಲ್ಲಿಯೂ ಸಹ ಅಹಿಂಸೆಗೆ ಇರುವ ಮಹತ್ವದ ಸ್ಥಾನವನ್ನು ತೋರಿಸಿಕೊಟ್ಟಿದ್ದಾನೆ. ರಾಜಕೀಯದಲ್ಲಿ ಉಪಯೋಗಿಸುವುದಕ್ಕೆ ಹೊಸದಾಗಿ ಕಂಡುಹಿಡಿದ ಸತ್ಯಾಗ್ರಹಕ್ಕೆ ಅಹಿಂಸೆಯನ್ನೇ ಮೊದಲನೆ ಕಾರಣವನ್ನಾಗಿ, ಮೂಲವನ್ನಾಗಿ ಅಳವಡಿಸಿಕೊಂಡನು. ಮಾನವನ ಬದುಕು, ಮನೆತನದ ಬಾಳು, ಸಮಾಜದ ಜೀವನ, ರಾಜಕೀಯ ಧರ್ಮ, ಹೋರಾಟ ಇವುಗಳಲ್ಲಿ ಪ್ರತಿಯೊಂದಕ್ಕೂ ಅಹಿಂಸಾ ಸತ್ಯಗಳಿಗೂ ನಿಕಟವಾದ, ಬಿಡಲಾಗದ ಸಂಬಂಧವು ಇದೆ, ಇರಲೇಬೇಕೆಂಬುದನ್ನು ಅನುಭವದಿಂದ ಪ್ರತ್ಯಕ್ಷವಾಗಿ ಪ್ರಾಯೋಗಿಕವಾಗಿ ತೋರಿಸಿಕೊಟ್ಟನು. ರಾಜಕೀಯ ಹೋರಾಟದಲ್ಲಿ ಇವುಗಳ ಸಹಾಯದಿಂದಲೇ ಭಾರತಕ್ಕೆ, ಭಾರತದ ಜನಾಂಗಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟನು. ವಿಜ್ಞಾನದ ಸಹಾಯದಿಂದ ರಾಕ್ಷಸಮನೋವೃತ್ತಿಯುಳ್ಳವರಾದ ಆಳರಸರ ಸರ್ವಶಕ್ತಿಯನ್ನೂ ಸತ್ಯ ಅಹಿಂಸೆಗಳಿಂದಲೇ ಸೋಲಿಸಿದನು. ಆಳರಸರ ವಿಜ್ಞಾನ, ಮದ್ದು, ಗುಂಡು, ವಿಮಾನ, ಬಾಂಬುಗಳೆಲ್ಲವನ್ನೂ ನುಂಗಿ ನೀರು ಕುಡಿದನು. ಸತ್ಯಸಾಚಿಯಾದ ಗಾಂಧೀಜಿಯ ಸತ್ಯ, ಅಹಿಂಸೆಗಳೆಂಬ ಅಸ್ತ್ರಗಳ ಮುಂದೆ ಅವೆಲ್ಲವೂ ನಿಶ್ಶಕ್ತಿಯುತವಾದುವು; ಇದೆಂತಹ ಕಲ್ಪನಾತೀತವಾದುದು! ಇದನ್ನು ನಮ್ಮ ಮುಂದಿನ ಸಾವಿರಾರು ವರ್ಷಗಳ ನಂತರದವರು ಹೇಳಿದರೆ ನಂಬಬಹುದೆ? ನಂಬಲಿ, ಬಿಡಲಿ, ಇದು ನಡೆದದ್ದು ನಿಜ. ಇಂದು ನಾವು ನೋಡಿದ್ದೇವೆ, ನೋಡುತ್ತಿದ್ದೇವೆ!

ಸ್ವಾತಂತ್ರ್ಯದ ದಿವಸ ಗಾಂಧೀಜಿಯು ಇಂದ್ರಪ್ರಸ್ಥ (ದಿಲ್ಲಿ) ದಲ್ಲಿ ಇರಬಹುದು. ನಮ್ಮ ಜೊತೆಗೆ ಸಂತೋಷದಲ್ಲಿ ಭಾಗವಹಿಸಬಹುದು. ಅಲ್ಲಿಂದಲೇ ನಮಗೆ ನಾಲ್ಕು ಹಿತನುಡಿಗಳನ್ನು

—೧೧ನೇ ಪುಟಕ್ಕೆ

# ಭವಿಷ್ಯ

ಜ್ಯೋತಿಷಿ:— ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯ ಕಥನ ಆಫೀಸ ಖಡೇಬಜಾರ ಬೆಳಗಾವಿ

## ಅಕ್ಟೋಬರ ೬ ರಿಂದ ೧೨ ರ ವರೆಗೆ

### ಮೇಷ

ಸ್ವತಃದ ಪ್ರಕೃತಿಯಲ್ಲಿ ಸ್ವಲ್ಪ ಕುರಕುರಿ. ಕಿಸೆಯಲ್ಲಿಯ ಹಣವನ್ನು ವೆಚ್ಚಮಾಡಿಯೂ ಎರಡನೆಯವರ ಮೋರೆಯನ್ನು ನೋಡುತ್ತ ಕೂಡ್ರುವ ಸರತಿ ಬರುವದು. ಸ್ಥಾವರದಲ್ಲಿ ಸ್ವಲ್ಪ ಚಿಂತೆ. ಬಂಧುವರ್ಗದವರಿಂದ ಪ್ರೇಮದ ವರ್ತನೆಯಾದರೆ ಮಿತ್ರರು ಅಷ್ಟೇ ನೀಚತನದ ಕೆಲಸ ಮಾಡುವರು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಕಡಮೆ ಆದರೆ ಪ್ರತಿಷ್ಠೆ ಉತ್ತಮ ಸ್ವಲ್ಪ ಶುಭ ಮತ್ತು ಭಾವೀಸೂಚಕ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಾನಿ ಆದರೆ ಶತ್ರುಗಳಿಗೂ ಯದೃಚ್ಛೆಯಿಂದಲೆ ಹಾನಿಯಾಗುವ ಸಂಭವ. ಪರಸ್ತ್ರೀ ಸಂಬಂಧದಲ್ಲಿ ಮನಸ್ಸು ಚಂಚಲವಾಗುವದು. ಪ್ರವಾಸ ತೊಂದರೆಯದು ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. [illegible]ನಿಯ ಕೊನೆಯ ೩ ಮತ್ತು ಭರಣಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೬, ೭, ೧೧ ಅನುಕೂಲ.

### ವೃಷಭ

ಪ್ರಕೃತಿ ಉತ್ತಮ ಆದರೆ ಕೆಲ ಕಾರಣಗಳಿಂದ ಹೆಂಡತಿ ಬಗ್ಗೆ ಅನಾದರ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಸಾಮಾನ್ಯ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಮಾನ್ಯ ಆದರೆ ಲಾಭ ಉತ್ತಮ. ಮಿತ್ರಸುಖ ಉತ್ತಮ. ಆದರೆ ಅವರ ಬಗ್ಗೆ ಮನೆಯಲ್ಲಿಯ ಜನರಿಂದ ತಪ್ಪು ತಿಳುವಳಿಕೆ ಮಾಡಲ್ಪಡುವ ಪ್ರಯತ್ನ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾಧಾನ. ಪ್ರವಾಸಾದಿ ಕೆಲಸ ಬಹಳ ತೊಂದರೆಯದು. ಕೃತ್ತಿಕೆಯ ಕೊನೆಯ ೩ ಮತ್ತು ರೋಹಿಣಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೬, ೭, ೮ ೯ ಅನುಕೂಲ.

### ಮಿಥುನ

ಪ್ರಕೃತಿ ಅನುಕೂಲ ಆದರೆ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಅತಿ ತೊಂದರೆಯವು. ಮನೆಯಲ್ಲಿಯ ಪ್ರತಿಯೊಬ್ಬನೂ ವಿರುದ್ಧ ಕಾರಸ್ಥಾನ ಮಾಡುವಲ್ಲಿ ನಿರತ. ಉದ್ಯೋಗದಲ್ಲಿ ಸ್ವತಂತ್ರ ಉದ್ಯೋಗ ಮಾಡುವವರಿಗೆ ಬಹಳ ತೊಂದರೆಯಾಗುವ ಪ್ರಸಂಗ. ಶತ್ರುಗಳಂತೆ ಮಿತ್ರರೂ ಕಪಟಜಾಲದಲ್ಲಿ ಹಿಡಿಯುವ ದುಷ್ಟ ಪ್ರಯತ್ನ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು ಆದರೆ ಶತ್ರುಗಳಿಗೂ ಯಶಸ್ಸು ಕಡಮೆ. ಪ್ರವಾಸ ಮತ್ತು ಭೆಟ್ಟಿಗಿಂತ[illegible] ಪತ್ರವ್ಯವಹಾರ ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ.

### ಕರ್ಕ

ಪ್ರಕೃತಿ ಸಾಧಾರಣವೆ ಅದಕ್ಕಿಂತ ಮನೋವ್ಯಥೆ. ಹೆಚ್ಚು ಪ್ರಾಪಂಚಿಕ ಸುಖ ಅಷ್ಟಕ್ಕಷ್ಟೆ. ಉದ್ಯೋಗದಲ್ಲಿ ಪ್ರತಿಷ್ಠೆ ಕಡಮೆ ಆದರೆ ಪ್ರಗತಿ ಮತ್ತು ಲಾಭವೂ ಉತ್ತಮ. ದೈವಿಕ ದೃಷ್ಟಾಂತದ ಸಂಭವ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರವೂ ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೮, ೯, ೧೦, ೧೧ ಅನುಕೂಲ.

### ಸಿಂಹ

ಪ್ರಕೃತಿಗೆ ಅನುಕೂಲ ಆದರೆ ಹೆಂಡತಿಗೆ ವಿರೋಧ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಕೆಲ ಸಲ ಹೆಚ್ಚಿದ್ದರೆ ಮತ್ತೆ ಕೆಲ ಸಲ ಕಡಮೆ. ಉದ್ಯೋಗದಲ್ಲಿ ಪ್ರಗತಿ ಯಾವದೊ ದಾರಿಯನ್ನು ಹಿಡಿದು ಹೋಗುವದರಿಂದ ಮನಸ್ಸು ಭಯಭೀತವಾಗುವದು ಆದರೆ ಪ್ರತಿಷ್ಠೆ ಮತ್ತು ಲಾಭವೂ ಸಾಧಾರಣ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು ಕ್ಷುಲ್ಲಕ ಮಾತುಗಳಿಂದ ಬಾಯಿಗೆ ಬಾಯಿ ಹತ್ತುವ ಪ್ರಸಂಗ ಅನೇಕರೊಡನೆ ಬರುವ ಪ್ರಸಂಗ ಮಿತ್ರಸುಖ ಉತ್ತಮ. ಪ್ರವಾಸದಲ್ಲಿ ಅಂಚಿಕ ಭೆಟ್ಟಿ ಮತ್ತು ಪತ್ರವ್ಯವಹಾರವೂ ಅನುಕೂಲ. ಮಘಾದ ಕೊನೆಯ ೩ ಮತ್ತು ಪೂರ್ವಾಫಾಲ್ಗುನಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೬, ೭, ೧೨ ಅನುಕೂಲ.

### ಕನ್ಯಾ

ಪ್ರಕೃತಿ ಉತ್ತಮ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಸಮಾಧಾನದ್ದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಅನುಕೂಲ. ಆದರೆ ಬಹಳ ಅಪೂಣ ಯುಕ್ತ ವೆಚ್ಚ ಮಾಡುವ ಪ್ರವೃತ್ತಿ. ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಪ್ಪಂದಿಕೆಯ ಸಂಭವ. ಅಲ್ಲದಿದ್ದರೆ ಒಳ್ಳೆ ಅನುಕೂಲತೆ. ಪ್ರವಾಸಾದಿ ಕೆಲಸ ಒಟ್ಟು ಉತ್ತರಾದ ಕೊನೆಯ ೩ ಮತ್ತು ಹಸ್ತಾದ ಮೊದಲನೆ ೩ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೬, ೭, ೮, ೯ ಅನುಕೂಲ.

### ತುಲಾ

ಪ್ರಕೃತಿಗೆ ಕಿರಕುಳ ಕ್ಲೇಶ. ಹೆಂಡತಿಗೆ ಕಣ್ಣು ಇಲ್ಲವೆ ತಲೆನೋವಿನ ಉಪದ್ರವ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಜೋರಿನದು ಆದರೆ ಪ್ರತಿಷ್ಠೆ ಮತ್ತು ಲಾಭ ಸಾಮಾನ್ಯವೆ. ಫಿರ್ಯಾದ ವೆಚ್ಚ ಬಹಳ. ಶೃಂಗಾರದ ವಸ್ತುಗಳಲ್ಲಿ ಹೆಚ್ಚು ಲಕ್ಷ ಮತ್ತು ವಿಶೇಷ ವೆಚ್ಚ. ವಾಹನ ಇಲ್ಲವೆ ದನಗಳಿಂದ ಉಪದ್ರವ. ವಾದದಲ್ಲಿ ಸ್ಪರ್ಧೆಯಲ್ಲಿ ಹಿಮ್ಮೆಡುವದು ಅಲ್ಲದೆ ಬೇಕಾಯಬೇಕೀರ ಆಚರಣೆಯ ಕಡೆಗೆ ಮನಸ್ಸು. ಮಿತ್ರತ್ವದಲ್ಲಿ ವಿರೋಧ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೬, ೭, ೧೧ ಅನುಕೂಲ.

### ವೃಶ್ಚಿಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಹೆಂಡತಿ ಬಗ್ಗೆ ಹೆಚ್ಚು ಆದರ. ಮಕ್ಕಳಲ್ಲಿ ಒಬ್ಬರ ವಿಶೇಷ ಉದಯ. ಉದ್ಯೋಗದಲ್ಲಿಯ ಪ್ರಗತಿಯಲ್ಲಿ ಬಹಳ ಅಡಚಣೆ. ಆದರೆ ಕೊನೆಯಲ್ಲಿ ಅವು ದೂರವಾಗಿ ಪ್ರತಿಷ್ಠೆ ಮತ್ತು ಲಾಭ ಮನಸ್ವಿಯಂತೆ. ಮಾತು ಬಹಳ ಮರ್ಮಭೇದಕವಾದುದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ವಿಜಯ. ಆದರೆ ಅದನ್ನು ಸಾಧ್ಯ ಮಾಡಿಕೊಳ್ಳುವದಕ್ಕಾಗಿ ಕೃಷ್ಣಕೃತ್ಯಗಳನ್ನು ಮಾಡಿದ ಲೋಕಾಪವಾದ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಉತ್ತಮ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೦, ೧೧, ೧೨ ಅನುಕೂಲ.

### ಧನು

ಪ್ರಕೃತಿ ಸಾಧಾರಣವೆ. ಮಕ್ಕಳಿಗೂ ಕೆಲಮಟ್ಟಿಗೆ ಕ್ಲೇಶ. ಹೆಂಡತಿಯ ಸಹವಾಸ ಸುಖ ಅನುಕೂಲ. ಆದರೆ ಉಳಿದ ಅನೇಕ ವಿಷಯಗಳಲ್ಲಿ ಉಭಯತರಲ್ಲಿ ಮೇಲಿಂದ ಮೇಲೆ ಮತಭೇದ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ತೊಂದರೆ ಅನಪೇಕ್ಷಿತವಾಗಿ ಸಂಭವಿಸುವ ಯೋಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ವೆಚ್ಚವೂ ಹೆಚ್ಚು ಪ್ರಮಾಣದಲ್ಲಿ ಸ್ಥಾವರ ಆಸ್ತಿಯನ್ನು ಹೆಚ್ಚಿಸಿಕೊಳ್ಳುವ ಇಚ್ಛೆಯು ವಿಲಕ್ಷಣ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸ ಅನುಕೂಲ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೬, ೭, ೧೧, ೧೨ ಅನುಕೂಲ.

### ಮಕರ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣವೆ. ಹೆಂಡತಿ ಮತ್ತು ಮಕ್ಕಳಿಂದ ಅಪ್ರಿಯ ಕೆಲಸಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ಕೆಟ್ಟ ಮತ್ತು ಹಿಂದೆ ಮುಂದೆ ಹಾನಿಯಾಗುವ ಕೆಲಸದಲ್ಲಿ ವೆಚ್ಚ ಮಾಡುವ ದುರ್ಬುದ್ಧಿ. ಮಿತ್ರತ್ವದಲ್ಲಿ ಹೆಚ್ಚಿನ ವಿರೋಧ. ಪ್ರವಾಸಾದಿ ಕೆಲಸ ಅನುಕೂಲ. ಉತ್ತರಾಷಾಢಾದ ಕೊನೆಯ ೩ ಮತ್ತು ಶ್ರವಣಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೮, ೯, ೧೨ ಅನುಕೂಲ.

### ಕುಂಭ

ಪ್ರಕೃತಿ ಒಮ್ಮೆ ಅನುಕೂಲವಿದ್ದರೆ ಕೆಲ ಸಲ ಕುರಕುರಿ. ಕೌಟುಂಬಿಕ ಸುಖ ಸಾಧಾರಣ. ಆದರೂ ಹಿರಿಯರಿಗೆ ಕ್ಲೇಶ ಇಲ್ಲವೆ ಅವರೊಡನೆ ವಿರೋಧ. ಉದ್ಯೋಗದಲ್ಲಿ ಪ್ರಗತಿ ಕಡಮೆ. ಪ್ರತಿಷ್ಠೆಗೆ ಬಹಳ ಕುಂದು ಮತ್ತು ಲಾಭವೂ ಅಂದಾಜಿಗಿಂತ ಬಹಳ ಕಡಮೆ. ಆದರೆ ಮಕ್ಕಳಲ್ಲಿ ಕೆಲವರ ಉನ್ನತಿ ಇಲ್ಲವೆ ಕೆಲ ಶುಭ ಸಂಗತಿಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೬, ೭, ೧೧ ಅನುಕೂಲ.

### ಮೀನ

ಪ್ರಕೃತಿ ಉತ್ತಮ. ಪ್ರಾಪಂಚಿಕ ಸುಖ ಸಾಧಾರಣವೆ. ಹೆಂಡತಿ ಮತ್ತು ಮಕ್ಕಳೊಡನೆ ಬಹಳ ಮತಭೇದ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಮನಸ್ಸಿನ ವಿರುದ್ಧ ಕೆಲಸದಲ್ಲಿ ವೆಚ್ಚದ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಮಾನ ಸ್ಥಿತಿ. ಮಿತ್ರರಲ್ಲಿ ಕ್ಲೇಶ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೮, ೯, ೧೦ ಅನುಕೂಲ.

# ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣ

(ಆನೇ ಪುಟದಿಂದ)

ವರಿಗೆಂತೋ ಅಂತೆಯೇ ಮುಸಲ್ಮಾನರ ಗೆಳೆಯನೆನಿಸಿ ಅಲ್ಲಿಗೆ ನಾನು ಹೋಗುವವನಿದ್ದೇನೆ. ನನ್ನ ಜೀವವೇ ಅವರ ಕೈಯಲ್ಲಿರುವುದು. ನನ್ನ ಜೀವ ತೆಗೆದುಕೊಳ್ಳಬೇಕೆಂಬ ಯಾವನ ಕೈಯಿಂದಾದರೂ ನಾನು ಸಂತೋಷದಿಂದ ಮರಣವನ್ನು ಸ್ವಾಗತಿಸುವ ಹಾರೈಕೆಯುಳ್ಳವನಾಗಿದ್ದೇನೆ. ಆಗ ನಾನು ಇತರರಿಗೆ ಬುದ್ಧಿವಾದ ಕೊಟ್ಟಂತೆಯೇ ಆಚರಿಸಿ ತೋರಿಸಿದಂತಾಗುತ್ತದೆ.

## ನಿರಾಶ್ರಿತರಿಗೆ ಮನೆಗಳು

ನಿರಾಶ್ರಿತರು ತಮಗೆ ಮನೆ ಬೇಕೆಂದಿರುವರು. ಕೆಳಗೆ ಭೂಮಿತಾಯ ತೊಡೆಯಿದೆ, ಮೇಲೆ ಬಾನಿನ ಹೊದಿಕೆಯುದೆಯೆಂದು ಅವರಿಗೆ ನಾನು ಹೇಳಬಯಸುತ್ತೇನೆ. ಒತ್ತಾಯಕ್ಕೊಳಗಾಗಿ ಮುಸಲ್ಮಾನರು ಬಿಟ್ಟು ಹೋದ ಮನೆಗಳಲ್ಲಿ ಪ್ರವೇಶಿಸುವುದನ್ನು ಬಿಟ್ಟು ಅವರು ಅಂತಹ ತರುತಲವಾಸವನ್ನು ಆಶ್ರಯಿಸುವುದು ಉತ್ತಮ. ಅವರೆಲ್ಲರೂ ಕೆಲಸ ಮಾಡಿದರೆ ಒಂದೇ ದಿನದಲ್ಲಿ ಅವಶ್ಯವಿರುವ ಗುಡಿಸಲುಗಳನ್ನು ಕಟ್ಟಿ ಮುಗಿಸಿ ಬಿಡಬಹುದು. ಆಗ ಅವರು ನಿರಾಶ್ರಿತರ ಕ್ರೋಧವನ್ನು ತಣಿಸಬಹುದು, ನಾನು ಕೂಡಲೇ ಪಂಜಾಬಿಗೆ ಹೋಗಬಹುದಾದ ವಾತಾವರಣವನ್ನು ಕಲ್ಪಿಸಬಹುದು.

ಬಿರ್ಲಾ ಭವನ, ಹೊಸದಿಲ್ಲಿ.
ತಾ. ೨೪-೯-೪೭

## ಭಾರತದ ದುರ್ಬಲ ನಾವೆ

ಪ್ರಾರ್ಥನೆಯಲ್ಲಿ ಹಾಡಿದ ವಿಷಯವನ್ನು ತಮ್ಮ ಪ್ರಾರ್ಥನೋತ್ತರ ಭಾಷಣದ ವಸ್ತುವನ್ನಾಗಿ ತೆಗೆದುಕೊಂಡು ಭಜನೆಯ ಪಲ್ಲವು ಇಂದಿನ ಭಾರತದ ಸ್ಥಿತಿಯನ್ನು ಚೆನ್ನಾಗಿ ವರ್ಣಿಸುತ್ತಿದೆಯೆಂದು ಗಾಂಧೀಜಿ ಮಾತಿಗೆ ಮೊದಲು ಮಾಡಿದರು. ಅದರಲ್ಲಿ ಕವಿಯು ತನ್ನ ದುರ್ಬಲ ನಾವೆಯನ್ನು ಸಾಗರದಾಚೆ ದಾಟಿಸೆಂದು ದೇವರಲ್ಲಿ ಮೊರೆಯಿಟ್ಟಿದ್ದನು.

## ಸರಕಾರಗಳಿಗೊಮ್ಮೆ ಅವಕಾಶ ಕೊಡಿ

ಸೇಡು ಪ್ರತೀಕಾರಗಳೇ ಇಂದು ಎಲ್ಲೆಲ್ಲೂ ತುಂಬಿ ಹೋಗಿವೆ. ದಿಲ್ಲಿಯ ಹಿಂದು ಶೀಖರಿಗೆ ಮುಸಲ್ಮಾನರಲ್ಲಿರುವುದು ಬೇಡಾಗಿದೆ. ತಮ್ಮನ್ನು ಪಾಕಿಸ್ತಾನದಿಂದ ಓಡಿಸಿರುವಾಗ ಅವರೇಕೆಹಿಂದೀ ಒಕ್ಕೂಟದಲ್ಲಿ ಇಲ್ಲವೆ ದಿಲ್ಲಿಯಲ್ಲಿ ಕಡೆಯಪಕ್ಷ ಇರಬೇಕು? ಎಂಬುದು ಅವರ ವಾದ. ಮುಸ್ಲಿಂ ಲೀಗು ಮೊದಲು ಕುಸ್ತಿಗೆ ಸೆಡ್ಡು ಹೊಡೆದು ನಿಂತದ್ದು ಎಂದು ಅವರ ಸವಾಲು. “ಲಡ್ ಕರ್ ಲೇಂಗೇ ಪಾಕಿಸ್ತಾನ್– ಯುದ್ಧ ಮಾಡಿ ಪಾಕಿಸ್ತಾನ ತೆಗೆದುಕೊಳ್ಳುತ್ತೇವೆ” ಎಂಬ ಕೂಗನ್ನು ಎಬ್ಬಿಸಿದ್ದು ಮುಸ್ಲಿಂ ಲೀಗಿನ ತಪ್ಪು. ಅಂಥದ್ದು ನಡೆಯುವುದೆಂದು ನಾನು ಎಂದೂ ನಂಬಿದ್ದಿಲ್ಲ. ಬಲಾತ್ಕಾರದಿಂದಲೇ ಆಗಿದ್ದರೆ, ಅವರಿಗೆಂದೂ ಹಿಂದುಸ್ತಾನವನ್ನು ವಿಭಜಿಸಲು ಸಾಧ್ಯವಾಗುತ್ತಿದ್ದಿಲ್ಲ. ಬ್ರಿಟಿಶರೂ ಕಾಂಗ್ರೆಸ್ಸಿಗರೂ ಒಪ್ಪದಿದ್ದರೆ ಆಗ ಈಗಿನಪಾಕಿಸ್ತಾನವೇ ಇರುತ್ತಿದ್ದಿಲ್ಲ. ಈಗ ಯಾರೂ ಹಿನ್ನಡೆಯಿಡಲು ಸಾಧ್ಯವಿಲ್ಲ. ಪಾಕಿಸ್ತಾನದ ಮುಸ್ಲಿಮರು ಅದಕ್ಕೆ ಅರ್ಹರು. ತಮಗೆ ಹೇಗೆ ಸ್ವಾತಂತ್ರ್ಯ ಬಂದಿತೆಂಬುದನ್ನು ಅವರು ಒಂದು ಗಳಿಗೆ ಯೋಚಿಸಿ ನೋಡಲಿ. ಕಾಂಗ್ರೆಸ್ಸೇ ಪ್ರಮುಖ ಯೋಧನಾಗಿತ್ತು. ನಿಷ್ಕ್ರಿಯ ಪ್ರತೀಕಾರವೇ ಆಯುಧವಾಗಿತ್ತು. ಬ್ರಿಟಿಶರು ಭಾರತದ ನಿಷ್ಕ್ರಿಯ ಪ್ರತೀಕಾರಕ್ಕೆ ಮಣಿದು ಕೈಕಟ್ಟಿ ದೂರ ನಿಂತರು. ಬಲಾತ್ಕಾರದಿಂದ ಪಾಕಿಸ್ತಾನವನ್ನು ನಿರ್ನಾಮಗೊಳಿಸುವುದೆಂದರೆ ಸ್ವರಾಜ್ಯವನ್ನೇ ಇಲ್ಲದಂತೆ ಮಾಡಿದಂತಾಗುವುದು. ಭಾರತಕ್ಕೆ ಎರಡು ಸರಕಾರಗಳಿವೆ. ತಮ್ಮೊಳಗೇ ಕದನವಾಡಿ ಇತ್ಯರ್ಥಪಡಿಸಿಕೊಳ್ಳಲು ಸರಕಾರಗಳಿಗೆ ಬಿಡುವುದು ನಾಗರಿಕರ ಕರ್ತವ್ಯ. ಪ್ರತಿನಿತ್ಯ ಜೀವ ಬಲಿ ತೆಗೆದುಕೊಳ್ಳುವುದು ಕೇವಲ ಪಾಪಕರವಾದ ವ್ಯರ್ಥ ಕಾರ್ಯ; ಅದರಿಂದ ಯಾರಿಗೂ ಲಾಭವಿಲ್ಲ; ಮಿತಿಮೀರಿದ ನಷ್ಟವೇ ಉಂಟು.

## ಜುನಾಗಡ

ಜುನಾಗಡದಲ್ಲಾಗುತ್ತಿರುವುದನ್ನು ಸ್ವಲ್ಪ ಯೋಚಿಸಿ ನೋಡಿರಿ. ಜುನಾಗಡ ಮತ್ತು ಉಳಿದೆಲ್ಲ ಕಾಠೇವಾಡದ ಸಂಸ್ಥಾನಗಳ ನಡುವೆ ಯುದ್ಧವಾಗಬೇಕೆ? ಉಳಿದ ಜನ ಮತ್ತು ನರೇಂದ್ರರೆಲ್ಲ ನಿಜವಾಗಿ ಕೂಡಿದರೆ ಜುನಾಗಡವೆಂದೂ ಕಾಠೇವಾಡದ ಉಳಿದ ಸಂಸ್ಥಾನಗಳಿಂದ ದೂರ ಹೋಗಿ ನಿಲ್ಲದು. ಇವಕ್ಕೆ ಕಾಯಿದೆಯ ಆಡಳಿತ ಅತ್ಯವಶ್ಯಕ.

ಬಿರ್ಲಾ ಭವನ, ಹೊಸದಿಲ್ಲಿ, ೨೫-೯-೪೭

## ಒಕ್ಕೂಟ ಸರಕಾರದ ಕರ್ತವ್ಯ

ಪ್ರಾರ್ಥನೆ ಪ್ರಾರಂಭಿಸುವ ಮುನ್ನ ಗಾಂಧೀಜಿಯ ಕೈಗೆ ಒಬ್ಬನೊಂದು ಚೀಟಿ ಕೊಟ್ಟನು. ಅದರಲ್ಲಿ ಪಾಕಿಸ್ತಾನ ಸರಕಾರವು ಅಲ್ಲಿಯ ಹಿಂದು ಶೀಖರನ್ನು ಹೊರಗಟ್ಟುತ್ತಿದೆಯೆಂದು ಅವನು ಬರೆದಿದ್ದನು.

‘ಗಾಂಧಿಯವರೇನೋ ಸಮಾನಸ್ಕಂಧರಂತೆ ಮುಸಲ್ಮಾನರನ್ನು ಹಿಂದುಸ್ತಾನದಲ್ಲಿರಿಸಕೊಳ್ಳಬೇಕೆಂದು ಒಕ್ಕೂಟ ಸರಕಾರಕ್ಕೆ ಬುದ್ಧಿ ಹೇಳುತ್ತಾರೆ. ಹಿಂದುಸ್ತಾನಸರಕಾರ ಹೇಗೆ ಈ ದ್ವಿಗುಣ ಭಾರವನ್ನು ಹೊತ್ತೀತು?’ ಎಂಬುದೇ ಅವನು ಹಾಕಿದ ಪ್ರಶ್ನೆಯಾಗಿತ್ತು. ಈ ಪ್ರಶ್ನೆಯನ್ನು ಉತ್ತರಿಸುತ್ತ ಗಾಂಧೀಜಿ ಪ್ರಾರ್ಥನಾನಂತರ ಮಾತಿಗಾರಂಭಿಸಿದರು.

ಪಾಕಿಸ್ತಾನದಲ್ಲಿಯ ಹಿಂದು ಶೀಖರಿಗಾಗುತ್ತಿರುವ ಅನ್ಯಾಯವನ್ನು ಹಿಂದುಸ್ತಾನ ಸರಕಾರ ಕಡೆಗಣಿಸಬೇಕೆಂದು ನಾನು ಹೇಳಿಲ್ಲ. ಅವರನ್ನು ರಕ್ಷಿಸಲು ಅದು ಶಕ್ತಿಮೀರಿ ಪ್ರಯತ್ನಿಸುವುದು. ಪಾಕಿಸ್ತಾನದ ಕುಪ್ರಸಿದ್ಧ ಪದ್ಧತಿಯಂತೆ ಇಲ್ಲಿಯ ಮುಸಲ್ಮಾನರನ್ನೋಡಿಸುವುದು ಅದಕ್ಕೆ ಸರಿಯಾದ ಮದ್ದಲ್ಲ. ತಾವಾಗಿಯೇ ಪಾಕಿಸ್ತಾನಕ್ಕೆ ಹೋಗುವೆವೆಂಬವರನ್ನು ಸುರಕ್ಷಿತವಾಗಿ ಗಡಿವರೆಗೆ ಒಯ್ದು ಬಿಟ್ಟುಬರಬೇಕು. ಪಾಕಿಸ್ತಾನದಲ್ಲಿರುವ ಹಿಂದು ಶೀಖರ ಸುರಕ್ಷಿತತೆಯನ್ನು ಕಾಯ್ದುಕೊಳ್ಳುವುದು ಹಿಂದುಸ್ತಾನ ಸರಕಾರದ ಕರ್ತವ್ಯ. ಆದರೆ ಅದಕ್ಕೆ ಸರಕಾರಕ್ಕೆ ಹಾಗೆ ಮಾಡಲು ಅವಕಾಶ ಕಲ್ಪಿಸಿ ಕೊಡಬೇಕು. ಪ್ರತಿಯೊಬ್ಬ ಹಿಂದೀಯನೂ ಆ ಕಾರ್ಯದಲ್ಲಿ ಸರಕಾರಕ್ಕೆ ನೆರವಾಗಬೇಕು. ಸ್ವಚ್ಛಂದ ವೃತ್ತಿಯು ಸಹಕಾರವಲ್ಲ. ನಮ್ಮ ಸ್ವಾತಂತ್ರ್ಯವು ಒಂದು ತಿಂಗಳು ಮತ್ತು ಹತ್ತು ದಿನಗಳ ಮಗು. ಈಗಿನಂತೆಯೆ ಹುಚ್ಚಾಟ ನಡೆಯುತ್ತ ಸಾಗಿದರೆ ಆ ಮಗುವನ್ನು ಮಗುತನದಲ್ಲೇ ಅವರು ಕೊಂದು ಹಾಕುವರು.

## ಧರ್ಮ ವಿಜಯ

ಗಾಂಧೀಜಿ ರಾಮಾಯಣದ ಕತೆ ಹೇಳಿದರು. ರಾಮಾಯಣದಲ್ಲಿ ರಾಮನು ಪರದೇಶಿಯೂ ರಾವಣನು ಚತುರಂಗಬಲಯುಕ್ತನೂ ಎನಿಸಿದ್ದರೂ ಧರ್ಮವನ್ನು ಅನುಸರಿಸಿದ್ದರಿಂದ ರಾಮನಿಗಲ್ಲದೆ ರಾವಣನಿಗೆ ಜಯ ಲಭಿಸಲಿಲ್ಲ. ಎರಡು ಕಡೆಯವರೂ ಅರಾಜಕ ಕೃತ್ಯಗಳಿಗಾರಂಭಿಸಿದರೆ ಯಾರು ಎದುರಿನವರ ತಪ್ಪುತೋರಿಸಿ ಕೊಡಲು ಶಕ್ತರಾದಾರು? ಯಾರದು ಹೆಚ್ಚು ತಪ್ಪೆಂದು ಹೇಳಲಾದೀತು? ಯಾರು ಮೊದಲು ಪ್ರಾರಂಭಿಸಿದರೆಂದು ಎನ್ನಲಾದೀತು? ಅವಾವುಗಳನ್ನು ಉತ್ತರಿಸುವುದರಿಂದಲೂ ಅವರು ತಮ್ಮ ನಡತೆಯನ್ನು ಸಮರ್ಥಿಸಿಕೊಳ್ಳಲಾರರು.

## ದ್ರೋಹಕ್ಕೆ ಪ್ರಾಯಶ್ಚಿತ್ತ

ನೀವು ಧೀರರು. ನೀವು ಭೀಮಬಲದ ಬ್ರಿಟಿಶ ಸಾಮ್ರಾಜ್ಯದೆದುರು ಎದೆತಟ್ಟಿ ನಿಂತವರು. ಇಂದು ನೀವೇಕಿಷ್ಟು ದುರ್ಬಲರಾಗಿರುವಿರಿ? ಧೀರರು ದೇವರಿಗಲ್ಲದೆ ಇನ್ನಾರಿಗೂ ಅಂಜರು. ಮುಸ್ಲಿಮರು ದ್ರೋಹಿಗಳಾಗಿ ಪರಿಣಮಿಸಿದರೆ ಅವರ ದ್ರೋಹವೇ ಅವರನ್ನು ಕೊಂದೀತು. ಅದು ಯಾವ ರಾಜ್ಯದಲ್ಲೂ ಅತ್ಯಂತ ದೊಡ್ಡ ಅಪರಾಧವೇಸರಿ. ಯಾವ ರಾಜ್ಯವೂ ದ್ರೋಹಿಗಳಿಗೆ ಆಶ್ರಯಕೊಡದು. ಆದರೆ ಕೇವಲ ಸಂದೇಹದ ಮೇಲಿಂದ ಜನರನ್ನು ಹೊರಗಟ್ಟುವುದು ತರವಲ್ಲ.

## ಪೋಲೀಸು ಮತ್ತು ಸೈನ್ಯದವರ ಕರ್ತವ್ಯ

ಪೋಲೀಸು ಮತ್ತು ಸೈನ್ಯದವರು ಪಾಕಿಸ್ತಾನದಲ್ಲಿ ಮುಸಲ್ಮಾನರ ಹಾಗೂ ಹಿಂದುಸ್ತಾನದಲ್ಲಿ ಹಿಂದುಗಳ ಪಕ್ಷ ವಹಿಸುತ್ತಾರೆಂದು ಕೇಳಿದ್ದೇನೆ. ಅದನ್ನು ಕೇಳಿ ನನಗೆ ಬಹಳ ಸಂತಾಪವಾಯಿತು. ಪರರಾಳಿಕೆಯಲ್ಲಿದ್ದಾಗ ತಾವೇನು ಮಾಡಬಲ್ಲೆವೆಂಬುದನ್ನು ಅವರು ಯೋಚಿಸಬಲ್ಲವರಾಗಿದ್ದಿಲ್ಲ. ಇಂದು ಬ್ರಿಟಿಶ ಅಧಿಕಾರಿಗಳೂ ಅವರೂ ಒಕ್ಕೂಟದ ಸೇವಕರು. ಅವರು ಪಕ್ಷಪಾತ ಮತ್ತು ಲಂಚಗುಳಿತನದಿಂದ ದೂರ ಇರಬೇಕು.

ಗೆಳೆಯರೇ, ನೀವು ಪೋಲೀಸು ಮತ್ತು ಸೈನ್ಯದವರಿಗೆ ಹೆದರಕೂಡದು. ನಿಮ್ಮ ನಾಡಿನಲ್ಲಿರುವ ಕೋಟಿಗಟ್ಟಲೆ ಜನತೆಯಲ್ಲಿ ಅವರು ಅತ್ಯಲ್ಪ ಸಂಖ್ಯಾಕರು. ನಾಗರೀಕರು ಅನಸಮಾಧಾನಿಸಿದ ಹೀಗೆ ನಿಮ್ಮ ನಡತೆ ಸರಿಯಾಗಿಟ್ಟುಕೊಂಡರೆ ಪೋಲೀಸು ಮತ್ತು ಸೈನ್ಯದವರಾದರೂ ಹಾಗಲ್ಲದೆ ಅನ್ಯರೀತಿಯಿಂದ ನಡೆದುಕೊಳ್ಳಲಾರರು.

ಬಿರ್ಲಾ ಭವನ, ಹೊಸದಿಲ್ಲಿ, ೨೬-೯-೪೭

## ಉರಿಯಾರಿಸುವ ಬಗೆ

ಪ್ರಾರ್ಥನಾರಂಭದ ಮೊದಲು ರೂಢಿಯಂತೆ ಗಾಂಧೀಜಿ ಕುರಾನಿನ ಕೆಲ ಶ್ಲೋಕಗಳ ಸಹಿತ ಪ್ರಾರ್ಥನೆ ಮಾಡುವಲ್ಲಿ ಯಾರಾದರೂ ವಿರೋಧವಿರುವುದೇನೆಂದು ಕೇಳಿದರು. ಒಬ್ಬ ತರುಣನು ಎದ್ದು ಕುರಾನಿನ ಶ್ಲೋಕಗಳನ್ನು ಬಿಟ್ಟುಬಿಡಬೇಕೆಂದನು. ತಾವು ಹಾಗೆ ಮಾಡಲಾರೆನೆಂದು ಗಾಂಧೀಜಿ ಉತ್ತರವಿತ್ತರು; ಆದರೆ ಇಡೀ ಪ್ರಾರ್ಥನೆಯನ್ನೇ ಬಿಡಲು ತಮಗೆ ಒಪ್ಪಿಗೆಯಿದೆಯೆಂದರು. ಸಭಿಕರು ತಮ್ಮ ಇಚ್ಛೆ ಹಾಗಿಲ್ಲವೆಂದೂ ಇಡೀ ಪ್ರಾರ್ಥನೆ ನಡೆಯಲೆಂದೂ ಹೇಳಿದರು. ಆಗ ವಿರೋಧಕನು ತಣ್ಣಗಾದನು.

## ಗ್ರಂಥಸಾಹೇಬ

ಆದಿನ ತಾವು ಕೆಲವು ಶೀಖ ಮಿತ್ರರನ್ನು ಕಂಡುದಾಗಿ ಗಾಂಧೀಜಿ ಹೇಳಿದರು. ಅವರು ಬಾಬಾ ಖಾರಕಸಿಂಗರ ಅನುಯಾಯಿಗಳು. ಇಂದಿನ ಕಟುಕತನವು ಶೀಖಸಂಘಕ್ಕಷ್ಟೇ ಅಲ್ಲ, ಎಲ್ಲ ಧರ್ಮಗಳಿಗೂ ವಿರುದ್ಧ ಎಂದು ಅವರು ಅಭಿಪ್ರಾಯಪಟ್ಟರು. ದೇವರಿಗೆ ಅಲ್ಲಾ ಎನ್ನಬಹುದು, ರಹೀಮ ಎನ್ನಬಹುದು, ಮತ್ತೇನಾದರೂ ಹೆಸರಿಂದ ಕರೆಯಬಹುದು, ಎಂದು ಗುರುನಾನಕನು ಹೇಳಿದ ಒಂದು ಶ್ಲೋಕವನ್ನು ಅವರಲ್ಲೊಬ್ಬನು ಗ್ರಂಥಸಾಹೇಬದಲ್ಲಿ ತಾನು ನೋಡಿರುವುದಾಗಿ ಹೇಳಿದನು. ದೇವರು ಹೃದಯಮಂದಿರವಾಸಿಯಾಗಿದ್ದರೆ. ಹೆಸರಿನಲ್ಲೇನಿದೆ? ಕಬೀರನಂತೆ ಗುರುನಾನಕನಾದರೂ ವಿವಿಧ ಧರ್ಮಗಳ ಸಾಮರಸ್ಯಕ್ಕಾಗಿ ಪ್ರಯತ್ನ ಮಾಡಿದನು. ಮೇಲೆ ಹೇಳಿದ ಶೀಖನು ತಾನು ಗಾಂಧೀಜಿಯೊಡನೆ ಓದಬೇಕೆಂದು ಉಕ್ತ ಶ್ಲೋಕವನ್ನು ಬರೆದು ಇಟ್ಟುಕೊಂಡಿದ್ದೆನೆಂದೂ ಮರು ದಿನ ತರುವುದಾಗಿಯೂ ಹೇಳಿದನು.

ಈ ದಿನ ನಾನು ಗವರ್ನರ ಜನರಲ್ಲರನ್ನು ಭೆಟ್ಟಿಯಾದೆ. ಅನಂತರ ದಿಲ್ಲಿಯ ವಿವಿಧ ಜಾತಿಗಳ ಪ್ರಮುಖ ಕಾರ್ಯಕರ್ತರನ್ನು ಕಂಡೆ. ಅದರ ಮೇಲೆ ಕಾರ್ಯಕಾರಿ ಸಮಿತಿಯ ಸಭೆಗೆ ಹೋದೆ. ಎಲ್ಲೆಲ್ಲೂ ಒಂದೇ ಸಮಸ್ಯೆ ಚರ್ಚಿಸಲ್ಪಟ್ಟಿತು. ಸೇಡು ಮತ್ತು ದ್ವೇಷಗಳ ಜ್ವಾಲೆಯನ್ನು ಹೇಗೆ ನಂದಿಸಬೇಕು? ಆತ್ಮಬಲವನ್ನವಲಂಬಿಸಿದವನಿಗೆ ದೈವಬಲ ತಪ್ಪಿದ್ದಲ್ಲ. ಅದುದರಿಂದ ಮನುಷ್ಯನು ಶಕ್ತಿಮೀರಿ ಪ್ರಯತ್ನಿಸಿ ಫಲಿತಾಂಶವನ್ನು ದೇವರ ಕೈಯಲ್ಲಿ ಒಪ್ಪಿಸಿ ಕುಳಿತು ಬಿಡಬೇಕು.

## ಗಾಂಧೀಜಿಯ ಮಹತ್ವಾಕಾಂಕ್ಷೆ

ಪಂಡಿತ ಠಾಕೂರದತ್ತರು ಲಾಹೋರಿಂದ ಗಾಂಧೀಜಿಯ ಹತ್ತಿರ ಬಂದಿದ್ದರು. ಅವರು ತಮ್ಮ ದು:ಖದ ಕಥೆಯನ್ನು ವಿವರಿಸಿದರು. ಕಥೆ ಹೇಳುವಾಗಲೇ ಅವರು ಅತ್ತರು. ತಾವು ತಮ್ಮ ಇಷ್ಟದ ವಿರುದ್ಧ ಲಾಹೋರನ್ನು ಬಿಡಬೇಕಾಯಿತೆಂದು ಗಾಂಧೀಜಿಗೆ ಹೇಳಿದರು. ಪಾಕಿಸ್ತಾನದಲ್ಲಿಯ ಸ್ವಸ್ಥಳದಲ್ಲೇ ಇದ್ದು ಅಳಿಯುವುದು ಲೇಸಲ್ಲದೆ ಮುಸಲ್ಮಾನರಿಂದ ಅವಮಾನಿತರಾಗಿ ಓಡಿಬರುವುದು ತಕ್ಕದ್ದಲ್ಲವೆಂಬ ಗಾಂಧೀಜಿಯ ಬುದ್ಧಿವಾದದಲ್ಲಿ ತಮಗೆ ನಂಬಿಗೆಯಿರುವುದಾದರೂ ಅದನ್ನು ನಡೆಸುವಷ್ಟು ಸಾಮರ್ಥ್ಯ ತಮ್ಮಲ್ಲಿಲ್ಲವೆಂದು ಪಂಡಿತರು ಹೇಳಿದರು; ಅನಂತರ ತಾವು ಬೇಕಾದರೆ ಪುನ: ಲಾಹೋರಿಗೆ ಹಿಂದಿರುಗಿ ಸಾವನ್ನಪ್ಪುವೆವೆಂದು ಜೋಡಿಸಿದರು. ಆದರೆ ಗಾಂಧೀಜಿ ಅದಕ್ಕೊಪ್ಪಲಿಲ್ಲ. ಮತ್ತು ಮುಂಬರಿದು ಅವರೆಂದರು.

“ನೀವೂ ಮತ್ತು ಮಿಕ್ಕ ಹಿಂದು ಶೀಖರೂ ನನಗೆ ದಿಲ್ಲಿಯಲ್ಲಿ ನಿಜವಾದ ಶಾಂತಿಯನ್ನು ಸ್ಥಾಪನೆಮಾಡಲು ನೆರವಾಗಬೇಕು. ಅನಂತರ ಪಶ್ಚಿಮ ಪಾಕಿಸ್ತಾನಕ್ಕೆ ನಾನು ಹೊಸ ಹುರುಪಿಂದ ಹೋಗಬಲ್ಲೆ. ನಾನು ಲಾಹೋರು, ರಾವಲಪಿಂಡಿ, ಶೇಖಪುರ ಮತ್ತು ಉಳಿದ ಎಲ್ಲ ಸ್ಥಳಗಳಿಗೆ. ಸಿಂಧ ಗಡಿನಾಡುಗಳಿಗೆ ಕೂಡ– ಹೋಗುವೆನು. ನಾನು ಎಲ್ಲರ ಹಿತೇಚ್ಛುಹಾಗೂ ಸೇವಕ. ಯಾರೂ ನನ್ನನು ಎಲ್ಲಿಹೋದರೂ ಪ್ರತಿಬಂಧಿಸರೆಂದು ಖಂಡಿತವಾಗಿ ಹೇಳಬಲ್ಲೆ. ನಾನು ಸೈನ್ಯದವರ ರಕ್ಷಣೆಯೊಡನೆ ಹೋಗುವದಿಲ್ಲ. ನಾನು ನನ್ನ ಜೀವನವನ್ನು ಜನರ ಕೈಯಲ್ಲಿಡುವೆನು. ಪಾಕಿಸ್ತಾನದಿಂದ ಹೊರಗಟ್ಟಲ್ಪಟ್ಟ ಪ್ರತಿಯೊಬ್ಬ ಹಿಂದು ಶೀಖನೂ ಗೌರವ ಗಾಂಭೀರ್ಯಗಳಿಂದ ತನ್ನ ಮನೆಗೆ ಹಿಂದಿರುಗುವವರೆಗೆ ನಾನು ವಿರಮಿಸೆನು.”

## ನಾಚಿಕೆಗೇಡಿತನ

ಪಂಡಿತ ಠಾಕೂರದತ್ತರು ಒಬ್ಬ ಪ್ರಸಿದ್ಧ ವೈದ್ಯರಾಗಿದ್ದರು. ಅವರು ಮದ್ದು ತೆಗೆದುಕೊಳ್ಳದೇ ತಮ್ಮ ಗೆಳೆಯರೆನಿಸಿದ ಅನೇಕ ಮುಸಲ್ಮಾನ ರೋಗಿಗಳಿಗೆ ಚಿಕಿತ್ಸೆ ನಡೆಸಿದ್ದರು. ಹಾಗಿದ್ದವರು ಲಾಹೋರನ್ನು ಬಿಡಬೇಕಾಗಿ ಬಂದುದು ಲಜ್ಜಾಸ್ಪದವೇ ಸರಿ. ಅದೇ ರೀತಿಯಲ್ಲಿ ಹಕೀಂ ಅಜ್ಮಲ್ ಖಾನರು ಹಿಂದು ಮುಸ್ಲಿಮರನ್ನೊಂದೇ ಎಂದು ತಿಳಿದು ದಿಲ್ಲಿಯಲ್ಲಿ ಅವರ ಔಷಧೋಪಚಾರ ನಡೆಸುತ್ತಿದ್ದರು. ಅವರು ತಿಬ್ಬಿಯ ಕಾಲೇಜನ್ನು ತೆರೆದಾಗ ನಾನು ಅದರ ಆರಂಭೋತ್ಸವ ಮಾಡಿದ್ದೆ. ದಿಲ್ಲಿಯಿಂದಲೂ ತಿಬ್ಬಿಯ ಕಾಲೇಜಿನಿಂದಲೂ ಹಕೀಂ ಅಜ್ಮಲ್‌ಖಾನರ ಮಕ್ಕಳು ಮೊಮ್ಮಕ್ಕಳು ಬಿಟ್ಟು ಹೋಗಬೇಕಾಗಿ ಬಂದುದು ನಾಚಿಕೆಗೇಡಾಗಿದೆ. ಎಲ್ಲ ಮುಸಲ್ಮಾನರೂ ದ್ರೋಹಿಗಳಲ್ಲ. ದ್ರೋಹಿಗಳಾಗಿ ತಿರುಗಿನಿಂತವರಿಗೆ ಸರಕಾರ ಯುಕ್ತ ದಂಡನೆ ವಿಧಿಸುತ್ತದೆ.

## ಅನ್ಯಾಯವನ್ನೆಂದೂ ಸಹಿಸಕೂಡದು

ನಾನು ಎಲ್ಲ ಯುದ್ಧಕ್ಕೂ ವಿರೋಧಿ. ಆದರೆ ನ್ಯಾಯ ಪಡೆಯಲು ಬೇರಾವ ಮಾರ್ಗವೂ ಇಲ್ಲದಿದ್ದರೆ ಅನಿವಾರ್ಯವಾದ ಯುದ್ಧಕ್ಕೆ ಸ್ವಾಗತ ಕೊಡಬೇಕಾಗುತ್ತದೆ. ಪಾಕಿಸ್ತಾನವು ಆಗಲೇ ತೋರಿಸಿಕೊಟ್ಟ ಅದರ ತಪ್ಪನ್ನು ಪುನಃ ಪುನಃ ಮಾಡುತ್ತ ಹೋದರೆ, ಮಾಡಿದ್ದು ಅತ್ಯಲ್ಪವೆಂದು ಹೇಳಿಕೊಳ್ಳುತ್ತ ಹೋದರೆ ಹಿಂದುಸ್ತಾನ ಸರಕಾರವು ಅದರ ಮೇಲೆ ಯುದ್ಧ ಹೂಡಬೇಕಾಗಬಹುದು. ಯುದ್ಧವೆಂದರೊಂದು ವಿನೋದವಲ್ಲ. ಯಾರೂ ಯುದ್ಧ ಬೇಕೆನ್ನುವುದಿಲ್ಲ. ಅದರಿಂದ ವಿನಾಶಪ್ರಾಪ್ತಿಯಾಗುವುದು. ಆದರೆ ಅನ್ಯಾಯವನ್ನು ಸಹಿಸಿರೆಂದು ನಾನು ಯಾರಿಗೂ ಬೋಧಿಸಲಾರೆ. ‘ನ್ಯಾಯವಾದ ಒಂದು ಕಾರ್ಯಕ್ಕಾಗಿ ಎಲ್ಲ ಹಿಂದುಗಳೂ ಅಳಿದರೆ ನನಗೆ ಲಕ್ಷ್ಯವಿಲ್ಲ. ಯುದ್ಧವೇ ನಡೆದರೆ ಪಾಕಿಸ್ತಾನದಲ್ಲಿಯ ಹಿಂದುಗಳು ಪಂಚಮದಳವಾಗಲಾರರು. ಅದನ್ನು ಯಾರೂ ಸಹಿಸರು. ಪಾಕಿಸ್ತಾನದಲ್ಲಿ ಅವರಿಗೆ ನಿಷ್ಠೆಯಿರದಿದ್ದರೆ ಅವರು ಅದನ್ನು ಬಿಟ್ಟು ಹೊರಡಬೇಕು. ಅದೇ ರೀತಿಯಿಂದ ಹಿಂದುಸ್ತಾನದಲ್ಲಿ ನಿಷ್ಠೆಯಿಲ್ಲದ ಮುಸ್ಲಿಮರು ಇಲ್ಲಿಂದ ಹೊರಟು ನಡೆಯಬೇಕು. ಹಿಂದು ಶೀಖರಿಗೆ ನ್ಯಾಯ ಕೊಡಿಸುವುದು ಸರಕಾರದ ಕರ್ತವ್ಯ. ಸರಕಾರ ತಮ್ಮ ಇಚ್ಛೆಯನ್ನೀಡೇರಿಸುವಂತೆ ಜನರು ಮಾಡಬಲ್ಲರು. ನನ್ನ ಪಾಡು ಮಾತ್ರ ಬೇರೆ; ನನ್ನ ಮಾರ್ಗವೇ ಬೇರೆ; ನಾನು ಪೂಜಿಸುವದು ಸತ್ಯ–ಅಹಿಂಸಾ ಸ್ವರೂಪದ ದೇವರನ್ನು.

## ಹಿಂದುಗಳೆ ಹಿಂದು ಧರ್ಮವನ್ನು ನಾಶಮಾಡಬಲ್ಲರು

ಹಿಂದೆ ಭಾರತ ನನ್ನ ಮಾತನ್ನು ಕೇಳುತ್ತಿತ್ತು. ಇಂದು ನಾನೊಬ್ಬ ಮೂಲೆಗುಂಪಾದ ಮನುಷ್ಯ. ಹೊಸಬಗೆಯ ಜಗತ್ತಿನಲ್ಲಿ– ಯಂತ್ರೋಪಕರಣ, ನೌಕಾಬಲ, ವಿಮಾನಬಲ, ಮತ್ತೆಲ್ಲ– ಇರುವಲ್ಲಿ ನನಗೆ ಸ್ಥಾನವಿಲ್ಲವೆಂದು ನನಗನೇಕರು ಹೇಳಿಬಿಟ್ಟಿದ್ದಾರೆ. ನಾನೆಂದೂ ಮೇಲಿನ ಹೊಸ ಬಗೆಗೊಪ್ಪುವಂಥವನಲ್ಲ.

ಯಾವ ಸಾಧನದಿಂದ ಸ್ವಾತಂತ್ರ್ಯ ಸಂಪಾದಿಸಿದರೋ ಅದರಿಂದಲೇ ಅವರು ಅದನ್ನುಳಿಸಿಕೊಳ್ಳುವೆವೆಂದು ಹೇಳುವ ಧೈರ್ಯ ಅವರಿಗಿದ್ದರೆ ನಾನು ಅವರ ಮನುಷ್ಯ. ನನ್ನ ದೈಹಿಕ ದೌರ್ಬಲ್ಯ ಮತ್ತು ಮಾನಸಿಕ ನಿರ್ವೇದನಗಳು ಆಗ ಅರ್ಧ ನಿಮಿಷದಲ್ಲಿ ಮಾಯವಾಗಿ ಹೋದಾವು. ಮುಸಲ್ಮಾನರು, “ಹಸ್‌ಕೇಲಿಯಾ ಪಾಕಿಸ್ತಾನ್, ಲಡೇಕೇ ಲೇಂಗಾ ಹಿಂದುಸ್ತಾನ್”– ನಗುನಗುತ್ತ ಪಾಕಿಸ್ತಾನ ಪಡೆದೆವು, ಯುದ್ಧ ಮಾಡಿ ಹಿಂದುಸ್ತಾನವನ್ನು ಪಡೆವೆವು” ಎಂದು ಹೇಳುತ್ತಾರೆಂದು ಕೇಳಿದ್ದೇನೆ. ನಾನು ಹೇಳುವಂತೆ ನನಗೆ ಮಾಡಗೊಡುವುದಾದರೆ ಶಸ್ತ್ರಬಲದಿಂದ ಹಿಂದುಸ್ತಾನವನ್ನು ಆಕ್ರಮಿಸಲೆಂದೂ ಬಿಡೆನು. ಕೆಲವರೆಂತೂ ಇಡೀ ಹಿಂದುಸ್ತಾನದವರನ್ನು ಧರ್ಮಾಂತರಗೊಳಿಸುವ ಕನಸು ಕಂಡಿದ್ದಾರಂತೆ. ಯುದ್ಧದಿಂದ ಅದೊಂದೂ ಆಗದು. ಪಾಕಿಸ್ತಾನ ಹಿಂದುಸ್ತಾನವನ್ನೆಂದೂ ನಾಶಗೊಳಿಸಲಾರದು. ಹಿಂದುಗಳೇ ತಮ್ಮನ್ನು ತಮ್ಮ ಧರ್ಮವನ್ನೂ ನಾಶಗೊಳಿಸಬಲ್ಲರು. ಅದೇ ರೀತಿ ಇಸ್ಲಾಂ ನಷ್ಟವಾಗಿ ಹೋಗುವುದಾದರೆ ಹಿಂದುಸ್ತಾನದ ಹಿಂದುಗಳಿಂದಲ್ಲ, ಪಾಕಿಸ್ತಾನದಲ್ಲಿನ ಮುಸಲ್ಮಾನರಿಂದೇ ಆದೀತು.

## ಸತ್ಯಕ್ಕೇ ಜಯ

ಹಿಂದಿನ ದಿನ ಸಭಿಕನೊಬ್ಬನು ಪ್ರಾರ್ಥನೆಯ ಮಾಡುವಾಗ ನಾನು ನಿಜವಾಗಿಯೂ ಮಹಾತ್ಮನಾಗಿದ್ದರೆ ಹಿಂದು ಮೊತ್ತ ಪವಾಡ ನಡೆಸಿ ಹಿಂದೂ ಶೀಖ ರನ್ನು ಹಿಂದುಸ್ತಾನವನ್ನು ಉಳಿಸಬೇಕೆಂದು ಕೇಳಿದ್ದನು. ನಾನೆಂದೂ ಮಹಾತ್ಮನೆಂದು ಕರೆಯಿಸಿಕೊಂಡಿಲ್ಲ. ನಾನು ಎಲ್ಲರಂತೆ ಸಾಮಾನ್ಯ ಮನುಷ್ಯ; ಆದರೆ ನಾನೂ ದುರ್ಬಲ. ಒಂದೇ ಒಂದು ನನ್ನ

(೧೦ ನೇ ಪುಟ

# ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣ

ಬಿರ್ಲಾಭವನ ಹೊಸದಿಲ್ಲಿ
ತಾ. ೨೧-೯-೪೭

### ಆಕ್ಷೇಪಕನಿಗೆ ಮನ್ನಣೆ

ಸಭಿಕರಲ್ಲಿ ಒಬ್ಬನು 'ಕುರಾಣ' ಪಠನಕ್ಕೆ ಆಕ್ಷೇಪಿಸಿದ್ದರಿಂದ ಇಂದು ಬಿರ್ಲಾಭವನದ ಪ್ರಾಂಗಣದಲ್ಲಿ ಪ್ರಾರ್ಥನೆ ಜರುಗಲಿಲ್ಲ. ಆದರೂ ಗಾಂಧೀಜಿ ಸಭಿಕರಿಗೆ ನಾಲ್ಕು ಮಾತು ಹೇಳಿದರು. ಆಕ್ಷೇಪಕನೊಡನೆ ತಾವು ಚರ್ಚೆಮಾಡುವದಿಲ್ಲವಾಗಿ ಅವರು ಹೇಳಿದರು. ಇಂದು ಜನತೆಯ ಹೃದಯದಲ್ಲಿ ಉಕ್ಕಿಬರುತಿರುವ ರೊಚ್ಚನ್ನು ತಿಳಿದುಕೊಂಡಿರುವದಾಗಿ ಅವರು ಹೇಳಿದರು. ವಾತಾವರಣವು ಅಷ್ಟೊಂದು ಪ್ರಕ್ಷುಬ್ಧವಾಗಿ ಬಿಟ್ಟಿದ್ದರಿಂದ, ಒಬ್ಬ ಆಕ್ಷೇಪಕನ ಆಕ್ಷೇಪಕಕ್ಕೂ ಮರ್ಯಾದೆಕೊಡುವದು ಅವಶ್ಯವೆಂದು ಎನಿಸುತ್ತದೆ. ಆದರೆ ಇದರಿಂದ ಪರಮಾತ್ಮನನ್ನೆ ಬಿಟ್ಟುಗೊಟ್ಟೆ ಇಲ್ಲವೆ ನನ್ನ ಹೃನ್ಮಂದಿರದಲ್ಲಿ ಆವನ ಪ್ರಾರ್ಥನೆಯನ್ನೆ ಬಿಟ್ಟುಗೊಟ್ಟೆನೆಂದು ಅರ್ಥವಾಗಲಾರದು. ಪ್ರಾರ್ಥನೆಗೆ ವಿಶುದ್ಧ ವಾತಾವರಣ ಅವಶ್ಯವಾಗಿದೆ. ಇಂಥ ಆಕ್ಷೇಪಗಳಿಂದ ಪ್ರತಿಯೊಬ್ಬ ಕಲಿಯತಕ್ಕ ಪಾಠ ಎಂದರೆ ಸೇವೆಮಾಡುವ ಇಚ್ಛೆ ಇದ್ದವರು ಅತ್ಯಂತಿಕ ತಾಳ್ಮೆ ಮತ್ತು ಸಹಿಷ್ಣುತೆಯನ್ನು ಅಳವಡಿಸಿಕೊಳ್ಳತಕ್ಕದ್ದು. ಎದುರನೆಯವರ ಮೇಲೆ ತಮ್ಮ ಅಭಿಪ್ರಾಯಗಳನ್ನು ಒತ್ತಾಯದಿಂದ ಹೇರಲು ಹವಣಿಸಬಾರದು ಎಂದು ಉಸುರಿದರು ಗಾಂಧೀಜಿ.

### ಕಾಯಿ ಇಲ್ಲದ ಗಿಡ ಒಣಗುವದು

ಅನಂತರ ಗಾಂಧೀಜಿಯವರು ತಾವು ಶ್ರೀ ಇಂದಿರಾ ಗಾಂಧಿಯವರೊಡನೆ ಬಹುಸಂಖ್ಯ ಮುಸಲ್ಮಾನರ ನೆರೆಮನೆಗಳಲ್ಲಿ ಅನೇಕ ಹಿಂದುಗಳು ವಾಸಿಸುತ್ತಿದ್ದ ಓಣಿಗೆ ಹೋದುದನ್ನು ವಿವರಿಸಿದರು. 'ಅಲ್ಲಿನ ಹಿಂದುಗಳು 'ಮಹಾತ್ಮಾ ಗಾಂಧೀಕೀ ಜೈ' ಎಂದು ನನ್ನನ್ನು ಸ್ವಾಗತಿಸಿದರು. ಆದರೆ ಇಂದು ನಾನು ಜಯಶಾಲಿಯಾಗಿಲ್ಲೆಂಬುದು ಪಾಪ ಅವರಿಗೇನುಗೊತ್ತು? ಅಲ್ಲದೆ ಹಿಂದು ಮುಸಲ್ಮಾನ ಮತ್ತು ಶೀಖರು ಪರಸ್ಪರ ಶಾಂತಿಯಿಂದ ಬಾಳದಿದ್ದರೆ ಬದುಕುವ ಇಚ್ಛೆ ನನಗೆ ಇಲ್ಲೆಂಬುದಾದರೂ ಅವರಿಗೇನು ಗೊತ್ತು? ಐಕ್ಯದಲ್ಲಿಯೇ ಶಕ್ತಿ ಅನೈಕ್ಯದಲ್ಲಿಯೇ ಅಶಕ್ತಿ ಎಂಬ ಮಾತಿನ ಮರ್ಮವನ್ನು ತಿಳಿದುಕೊಳ್ಳಬೇಕೆಂದು ನಾನು ಮಿತಿಮೀರಿ ಪ್ರಯತ್ನಿಸುತ್ತಿದ್ದೇನೆ. ಕಾಯಿಗಳನ್ನು ಹಿಡಿಯದ ಗಿಡ ಒಣಗುತಿರುವಂತೆ ತಮ್ಮ ಸೇವೆಗೆ ಅಪೇಕ್ಷಿತ ಫಲ ದೊರಕದಿದ್ದರೆ ತಮ್ಮ ದೇಹವೂ ನಿರರ್ಥಕವಾಗುವದು. ಈ ಮಾತು ಸತ್ಯವಾಗಿದ್ದರೂ ಫಲಾಪೇಕ್ಷೆಯಿಲ್ಲದೆ ಪ್ರತಿಯೊಬ್ಬನು ಕರ್ತವ್ಯ ಮಾಡತಕ್ಕದ್ದೆಂಬುದೂ ಅಷ್ಟೇ ಸತ್ಯಪೂರ್ಣವಾಗಿದೆ. ಫಲಾಪೇಕ್ಷೆಗಿಂತ ನಿಷ್ಕಾಮಸೇವೆಯೆ ಹೆಚ್ಚು ಫಲಕಾರಿಯಾಗದುದು. ವಸ್ತುಸ್ಥಿತಿಯ ರಹಸ್ಯವನ್ನೇ ನಾನೀಗ ಹೇಳುತಿರುವೆನು. ಉಪಯುಕ್ತವಾಗದಿದ್ದ ದೇಹವು ನಾಶಹೊಂದಿ ಹೊಸ ದೇಹಕ್ಕೆ ಅವಕಾಶವನ್ನು ಕಲ್ಪಿಸಿಕೊಡುತ್ತದೆ. ಆತ್ಮವು ಅವಿನಾಶಿಯಾಗಿದೆ ಮತ್ತು ಕರ್ಮ ಹಾಗು ಸೇವೆಯ ದ್ವಾರಾ ಮೋಕ್ಷವನ್ನು ಸಂಪಾದಿಸುವದಕ್ಕಾಗಿ ಹೊಸ ಹೊಸ ದೇಹಗಳನ್ನು ಪಡೆಯುತಿರುವದು ಎಂದು ಗಾಂಧೀಜಿ ಹೇಳಿದರು.

### ನಿಮ್ಮ ಮನೆಯಲ್ಲಿಯೆ ಉಳಿಯಿರಿ

ಆ ಪ್ರದೇಶದಲ್ಲಿಯ ಮುಸಲ್ಮಾನರನ್ನು ಭೆಟ್ಟಿಯಾಗಿ, ನೆರೆಯಲ್ಲಿರುವ ಹಿಂದುಗಳು ಬೇಕಾದಷ್ಟು ಪೀಡಿಸಿದರೂ ಮರಣ ಬರುವ ವರೆಗೆ ಛಳಿಸಿದರೂ ನಿಮ್ಮ ಮನೆಯಲ್ಲಿಯೆ ಉಳಿಯಬೇಕೆಂದು ಗಾಂಧೀಜಿ ಸಲಹೆಕೊಟ್ಟರು. ಆ ಬಗೆಯ ಜಾಣತನ ಇಲ್ಲದಿದ್ದರೆ ಮರಣವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಸ್ಥಳಾಂತರಮಾಡಲು ಅವರು ಸ್ವತಂತ್ರರಿರುವರು. ನನ್ನ ಸಲಹೆಯಂತೆ ನಡೆದದ್ದಾದರೆ ಇಸ್ಲಾಮು ಮತ್ತು ಹಿಂದುಸ್ತಾನ ಇವೆರಡರ ಸೇವೆಯನ್ನು ಮಾಡಿದಂತಾಗುವದು. ಮುಸಲ್ಮಾನರನ್ನು ಹಿಂಸಿಸಿದ ಹಿಂದು ಮತ್ತು ಶೀಖರು ತಮ್ಮ ಧರ್ಮಕ್ಕೇ ಅಪಮಾನವನ್ನು ಮಾಡುವರು ಅಲ್ಲದೆ ಹಿಂದುಸ್ತಾನಕ್ಕೆ ಅಪರಿಮಿತ ಅಪಾಯವನ್ನು ಮಾಡುತಿರುವರು. ೪|| ಕೋಟಿ ಜನರನ್ನು ಅಳಿದು ಬಿಡುವೆವು; ಇಲ್ಲವೆ ಪಾಕಿಸ್ತಾನಕ್ಕೆ [illegible] ಅಟ್ಟಿಬಿಡುವೆವು ಎಂದು ತಿಳಿಯುವದು [illegible]ಕೇವಲ ಮೂರ್ಖತನ. ಗಾಂಧೀಜಿ ಹಾಗೆ ಮಾಡ [illegible]ಗಿರುವದಾಗಿ ಕೆಲವರು ಸೂಚಿಸಿದ್ದಾರೆ. ತಮ್ಮ [illegible] ಮತ್ತು ಸ್ನೇಹಿತರ ಸಹಾಯದಿಂದ [illegible] ನಿರಾಶ್ರಿತರನ್ನು ಮೊದಲಿನ ಸ್ಥಳದಲ್ಲಿ [illegible] ಮನಸು ನನಗೆಂದೂ ಇರುವದಿಲ್ಲ. [illegible] ಶೀಖರ ರೊಚ್ಚು ಕಡಿಮೆಯಾಗುಂಬಂದು ನಿರಾಶ್ರಿತರನ್ನು ಮರ್ಯಾದೆಯಿಂದ ಮರಳಿ ಕರೆದುಕೊಂಡು ಬರುವರೆಂದು ನನ್ನ ಅಭಿಪ್ರಾಯವಾಗಿದೆಂದು ಗಾಂಧೀಜಿ ಹೇಳಿದರು. ಬರಿದಾದ ಮನೆಗಳನ್ನು ಸರಕಾರದವರು ವಶಪಡಿಸಿಕೊಂಡು ಸುಸ್ಥಿತಿಯಲ್ಲಿ ಮತ್ತು ನಿರಾಶ್ರಿತರಿಗಾಗಿ ನಿಕ್ಷೇಪ ಇಡುವರೆಂದು ಆಶಿಸಲಾಗಿದೆ.

### ಸರಕಾರ ರಾಜೀನಾಮೆ ಕೊಡತಕ್ಕದ್ದು?

ಸರಕಾರದಲ್ಲಿ ಆ ಶಕ್ತಿಯಿಲ್ಲದಿದ್ದರೆ—ಸರಿಯಾದುದನ್ನು ಮಾಡಲು ಜನತೆಯು ಸರಕಾರಕ್ಕೆ ಅವಕಾಶ ಕಲ್ಪಿಸಿ ಕೊಡದಿದ್ದರೆ—ಹಿಂದುಸ್ತಾನದಿಂದ ಎಲ್ಲ ಮುಸಲ್ಮಾನರನ್ನು ಹೊರಗಟ್ಟುವ ಇಲ್ಲವೆ ಕೊಲ್ಲುವ ಕಾರ್ಯಕ್ರಮವನ್ನು ಯಶಸ್ವಿಮಾಡುವಂತಹರಿಗಾಗಿ ರಾಜೀನಾಮೆ ಕೊಟ್ಟು ಹೊರಗೆಬರಬೇಕೆಂದು ಸರಕಾರಕ್ಕೆ ನಾನು ಸಲಹೆ ಕೊಡುತ್ತೇನೆ. ಪತ್ರಿಕೆಯೊಂದು ಒಳ್ಳೆ ಗಂಭೀರರೀತಿಯಿಂದ ಆ ಬಗೆಯ ಸೂಚನೆಯನ್ನೂ ಮಾಡಿದ್ದುಂಟು ರಾಷ್ಟ್ರೀಯ ಆತ್ಮಘಾತ ಮತ್ತು ಹಿಂದುತ್ವದ ಸಮೂಲ ನಾಶದ ಸಲಹೆಯಿದು. ಸ್ವತಂತ್ರ ಹಿಂದುಸ್ತಾನದಲ್ಲಿ ಇಂಥ ವರ್ತಮಾನಪತ್ರ ಇರುವದೆಂಬದನ್ನು ಕೇಳಿ ನನಗೆ ಆಶ್ಚರ್ಯವೆನಿಸುತ್ತದೆ. ಪತ್ರಿಕಾಸ್ವಾತಂತ್ರ್ಯವೆಂದರೆ ಸಾರ್ವಜನಿಕರ ಮನಸ್ಸಿನಲ್ಲಿ ವಿಷವನ್ನು ತುಂಬುವದಕ್ಕೆ ಲಾಯಸೆನ್ಸ ಕೊಟ್ಟಂತೆಯೆ? ಇಂಥ ಧೋರಣವನ್ನು ಕೈಕೊಳ್ಳಬೇಕೆಂದು ಬಯಸುವವರು ಸರಕಾರಕ್ಕೆ ರಾಜೀನಾಮೆ ಕೊಡಬೇಕೆಂದು ಕೇಳಿಕೊಳ್ಳಬೇಕು. ಈ ವರೆಗೆ ಹಿಂದುಸ್ತಾನದ ಕಡೆಗೆ ಇಡೀ ಜಗತ್ತೂ ಆಶಾದೃಷ್ಟಿಯಿಂದ ನೋಡುತಿದ್ದರೂ ಇನ್ನು ಮುಂದೆ ಹಾಗೆ ಮಾಡುವದನ್ನು ಬಿಟ್ಟುಗೊಡಬಲ್ಲದು. ಏನೇ ಆದರೂ ಎಲ್ಲಿಯ ವರೆಗೆ ನನ್ನಲ್ಲಿ ಉಸಿರಿರುವದೊ ಅಲ್ಲಿಯ ವರೆಗೆ ಇಂಥ ಹುಚ್ಚಾಟದ ವಿರುದ್ಧವೆ ನಾನು ಸಲಹೆ ಕೊಡುವೆ.

ಬಿರ್ಲಾಭವನ, ಹೊಸದಿಲ್ಲಿ,
ತಾ. ೨೨-೯-೪೭

### ಪ್ರತಿವಾದಿಗಳ ಕರ್ತವ್ಯ

ಒಬ್ಬನೇ ಆದ ಪ್ರತಿವಾದಿಗೆ ಮಣಿದು ಸಾರ್ವಜನಿಕ ಪ್ರಾರ್ಥನೆ ನಡೆಸುವುದನ್ನು ಬಿಟ್ಟು ನಾನು ಬುದ್ಧಿವಂತನೆನಿಸಿಕೊಂಡರೂ ಇನ್ನೂ ಸ್ವಲ್ಪ ವಿಶದವಾಗಿ ಈ ಸಂಗತಿಯನ್ನು ಪರೀಕ್ಷೆಗೆ ಗುರಿಪಡಿಸುವುದು ಅಯುಕ್ತವಾಗಲಾರದು. ಸಾರ್ವಜನಿಕರಲ್ಲಿ ಯಾವನೂ ಬರಬಾರದೆಂದಿಲ್ಲವಾದುದರಿಂದ ಮಾತ್ರ ಪ್ರಾರ್ಥನೆ ಸಾರ್ವಜನಿಕವೆನಿಸುತ್ತದೆ. ಅದು ಖಾಸಗಿ ಸ್ಥಳದಲ್ಲೇ ನಡೆಯುವಂಥದು. ಸರಿಯಾದ ಅಗತ್ಯವೆಂದರೆ, ಕುರಾನಿನ ಶ್ಲೋಕಗಳ ಸಹಿತವಾಗಿ ಹೇಳುವ ಪ್ರಾರ್ಥನೆಯಲ್ಲಿ ಯಾರಿಗೆ ಹೃತ್ಪೂರ್ವಕ ಶ್ರದ್ಧೆಯಿದೆಯೋ ಅವರು ಮಾತ್ರ ಬರತಕ್ಕದ್ದು. ಈ ನಿಯಮವು ಸಾರ್ವಜನಿಕ ಸ್ಥಳಗಳಲ್ಲಿ ನಡೆವ ಪ್ರಾರ್ಥನೆಗೂ ಅನ್ವಯಿಸಬೇಕು. ಪ್ರಾರ್ಥನಾ ಸಭೆಯು ಚರ್ಚೆಯ ಸಮ್ಮೇಲನವಲ್ಲ. ಒಂದೇ ಸ್ಥಳದಲ್ಲಿ ಅನೇಕ ಜಾತಿಯವರು ಪ್ರಾರ್ಥನಾ ಸಭೆ ನೆರವೇರಿಸುವುದನ್ನು ಕಲ್ಪಿಸಬಹುದು. ಯಾವುದಾದರೊಂದು ಪ್ರಾರ್ಥನೆ ಸೇರದವರು ಅಲ್ಲಿ ಹೋಗದಿರುವುದು ನಾಗರಿಕ ನಡತೆ. ಹಾಗಲ್ಲದಿದ್ದರೆ ಗಲಭೆಯ ವಿನಾ ಯಾವ ಸಭೆಯೂ ನಡೆವಂತಾಗದು. ಗಲಭೆಯು ನಿತ್ಯ ನಿಯಮವಾಗಿಬಿಟ್ಟಿತೆಂದರೆ ಪೂಜಾಸ್ವಾತಂತ್ರ್ಯ—ಸಾರ್ವಜನಿಕ ಭಾಷಣ ಸ್ವಾತಂತ್ರ್ಯ ಕೂಡ—ಒಂದು ನಕಲಿ ನಾಟಕವಾಗಿ ಹೋದೀತು. ಸಂಸ್ಕೃತ ಸಮಾಜದಲ್ಲಿ ಈ ಮೂಲಭೂತ ಹಕ್ಕಿನ ಬಳಕೆಗೆ ಸರಕಾರದ ಖಡ್ಗರಕ್ಷಣೆ ಅವಶ್ಯವೆನಿಸಕೂಡದು. ಅದಕ್ಕೆ ಸರ್ವ ಸಮ್ಮತಿಯಿರಬೇಕು.

### ಹಿತವಾದ ಸಹನೆ

ಕಾಂಗ್ರೆಸ್ಸಿನ ವಾರ್ಷಿಕ ಸಭೆಗಳಲ್ಲಿ ಅದರ ವಸ್ತುಪ್ರದರ್ಶನಾಲಯದಲ್ಲಿ ಭಿನ್ನ ಜಾತಿಗೆ ಸೇರಿದ ಇಲ್ಲವೆ ಭಿನ್ನ ಭಿನ್ನ ರಾಜಕೀಯ ಪಕ್ಷಗಳಿಗೆ ಸೇರಿದ ಅನೇಕರು ಸಭೆ ಸೇರಿ ಭಿನ್ನವಾದ—ಒಮ್ಮೊಮ್ಮೆ ತೀರ ವಿರುದ್ಧವಾದ—ಅಭಿಪ್ರಾಯಗಳನ್ನು ಪ್ರಕಾಶ ಪಡಿಸುತ್ತಿದ್ದುದನ್ನು ನಾನು ಬಹಳ ಸಂತೋಷದಿಂದ ನೋಡಿದ್ದೇನೆ. ಅವರು ಪರಸ್ಪರ ನಿಂದೆ ಅಪಮಾನಗಳಲ್ಲಿ ನಿರತರಾಗುತ್ತಿರಲಿಲ್ಲ; ಅವರಿಗೆ ಎಂದೂ ಪೋಲೀಸು ಸಹಾಯ ಬೇಕಾಗುತ್ತಿದ್ದಿಲ್ಲ. ಕೆಲವೊಮ್ಮೆ ಈ ಮೂಲಭೂತ ನಿಯಮದ ಉಲ್ಲಂಘನೆ ನಡೆದಾಗ ಅವರು ಜನರ ನೇರವಾದ ಬೈಗುಳಕ್ಕೆ ಗುರಿಯಾಗಿದ್ದಾರೆ. ಆ ಹಿತವಾದ ಸಹನಾಭಾವ ಎಲ್ಲಿಗೆ ಹೋಯಿತು? ರಾಜಕೀಯ ಸ್ವಾತಂತ್ರ್ಯ ಪಡೆದುದರಿಂದಲೇ ನಾವು ಅದನ್ನು ದುರುಪಯೋಗ ಮಾಡಿ ಪರೀಕ್ಷಿಸುತ್ತಿರುವೆವೆ? ರಾಷ್ಟ್ರದ ಜೀವನದಲ್ಲಿ ಇದೊಂದು ಕ್ಷಣಿಕವಾದ ಕ್ಷೋಭವಾಗಲೆಂದು ನಾವು ಹಾರೈಸೋಣ.

ಇದೆಲ್ಲ ಮುಸ್ಲಿಮ ಲೀಗಿನ ಪಾಪಕರ್ಮಗಳಿಂದಲೇ ಸಂಭವಿಸಿತೆಂದು ಪದೇ ಪದೇ ಹೇಳುವಂತೆ ನನಗೆ ಯಾರೂ ಹೇಳಬರದಿರಲಿ. ಈ ಮಾತಿನ ಸತ್ಯವನ್ನು ಒಪ್ಪಿಕೊಳ್ಳಿರಿ. ಯಾವುದಾದರೊಂದು ಅಪೂರ್ವವಾದ ಸಂಕಟದಲ್ಲಿ ಬಡವಾಗಿ ಹೋಗುವಷ್ಟು ನಮ್ಮ ಸಹನಶಕ್ತಿ ದುರ್ಬಲವಾಗಿರುವುದೆ? ನಮ್ಮ ವಿನಯಶೀಲತೆ ಮತ್ತು ಸಹಿಷ್ಣುತೆಗಳಿಗೆ ಏನಾದರೂ ಬೆಲೆಯಿದೆಯೆಂಬುದಾದರೆ ಅವು ಎಂತಹ ಉಗ್ರಬಾಧೆಯಲ್ಲಿ ನಾವು ಬಳಲುತ್ತಿದ್ದರೂ ಅವನ್ನು ಬಿಟ್ಟು ನಿಲ್ಲಬಾರದು. ಅದಾಗದಿದ್ದರೆ ಭಾರತಕ್ಕಿದು ದುರ್ದಿನವೆಂದೇ ಹೇಳಬೇಕು. ನಾವು ಸ್ವಾತಂತ್ರ್ಯಕ್ಕೆ ಅರ್ಹರಲ್ಲವೆನ್ನಲು ನಮ್ಮ ವಿಮರ್ಶಕರಿಗೆ (ಬಹಳ ಇದ್ದಾರೆ) ಸುಲಭವಾಗುವಂತೆ ಮಾಡಿ ಕೊಡದಿರೋಣ. ಅಂತಹ ವಿಮರ್ಶಕರ ಮಾತಿಗುತ್ತರವಾಗಿ ಬಹಳ ಪ್ರತ್ಯುತ್ತರಗಳು ನೆನಪಾಗುತ್ತವೆ. ಆದರೆ ಅವು ಅಷ್ಟೇನೂ ತೃಪ್ತಿಯುಂಟು ಮಾಡುವಂತಿಲ್ಲ. ಕೋಟ್ಯವಧಿ ಜನರ ನಾಡಾದ ಈ ಹಿಂದುಸ್ತಾನವನ್ನು ಪ್ರೀತಿಸುವ ನನ್ನ ಹೆಮ್ಮೆಯನ್ನು ನಮ್ಮ ಸಹಿಷ್ಣುವೂ ಸಂಯುಕ್ತವೂ ಆದ ಸಂಸ್ಕೃತಿಯು ಸ್ವತಃ ಸಿದ್ಧವಾಗಲಿಲ್ಲವಲ್ಲ ಎಂಬುದು ಭಂಗಪಡಿಸುತ್ತಿದೆ.

### ಭಾರತ ಕರ್ತವ್ಯಚ್ಯುತವಾದರೆ

ಭಾರತ ಕರ್ತವ್ಯಚ್ಯುತವಾದರೆ ಏಶಿಯ ಸಾಯುತ್ತದೆ. ಅದನ್ನು ನ್ಯಾಯವಾಗಿ ಅನೇಕ ಸಂಮಿಶ್ರ, ಸಂಗತ ಸಂಸ್ಕೃತಿ ಹಾಗೂ ನಾಗರಿಕತೆಗಳ ತೊಟ್ಟಿಲೆಂದು ಕರೆಯಲಾಗಿದೆ. ಏಶಿಯದ ಅಥವಾ ಜಗತ್ತಿನ ಯಾವುದೇ ಭಾಗದಲ್ಲಿರುವ ಪರರಾಳಿಕೆಯಿಂದ ನಷ್ಟಹೊಂದಿದ ಮಾನವ ಕುಲಕ್ಕೆ ಭಾರತವು ಆಶಾಕಿರಣವಾಗಲಿ.

### ಅನಧಿಕೃತ ಆಯುಧಗಳು

ಅಪ್ಪಣೆಯಿಲ್ಲದೆ ಆಯುಧಗಳನಿಟ್ಟುಕೊಳ್ಳುವುದನ್ನು ಇದು ನನಗೆ ನೆನಪು ಮಾಡಿಕೊಡುತ್ತದೆ. ಕೆಲವಂತೂ ಖಂಡಿತವಾಗಿ ಸಿಕ್ಕಿವೆ. ಅಲ್ಪ ಪರಿಮಾಣದಲ್ಲಿ ಅವುಗಳನ್ನು ನನ್ನೆಡೆಗೆ ತಾವಾಗಿಯೇ ತಂದೊಪ್ಪಿಸುತ್ತಿದ್ದಾರೆ. ಸರ್ವೋಪಾಯಗಳಿಂದ ಅವನ್ನು ಹೊರದೆಗೆಯಲಿ, ನನಗೆ ತಿಳಿದ ಮಟ್ಟಿಗೆ ಇಲ್ಲಿಯ ವರೆಗೆ ಹೊರದೆಗೆದದ್ದು ದಿಲ್ಲಿಯಂತಹ ನಗರಕ್ಕೆ ಸಾಲದು. ಬ್ರಿಟಿಶರ ಆಳಿಕೆಯಲ್ಲಿ ಕೂಡ ಗುಪ್ತ ಆಯುಧಗಳನ್ನಿಟ್ಟುಕೊಳ್ಳುವುದಿತ್ತು. ಆಗ ಆ ಬಗ್ಗೆ ಯಾರೂ ತೊಂದರೆಪಟ್ಟುಕೊಳ್ಳುತ್ತಿದ್ದಿಲ್ಲ. ಒಂದು ಗುಪ್ತಸ್ಥಳದಲ್ಲಿ ನಿಶ್ಚಿತವಾಗಿ ನೆಲೆಸಿದ್ದು ತಿಳಿದು ಬಂದಕೂಡಲೆ ಬೇಕಾದ ಹಾಗೆ ಆ ಗುಪ್ತ ಮದ್ದಿನ ಮನೆಗಳನ್ನು ಸಿಡಿದು ಸುಡಿರಿ. ಬರಿಗ್ಯೆ ಹತ್ತೊಂಬತ್ತು ಮೊಳವೆಂಬುದರ ಪುನರಾವೃತ್ತಿಯಾಗದಿರಲಿ. ನಾವು ರಾಜಕೀಯವಾಗಿ ಸ್ವತಂತ್ರರಿರುವಾಗ ಬ್ರಿಟಿಶರಿಗೊಂದು ನ್ಯಾಯವನ್ನು ನಮಗಿನ್ನೊಂದನ್ನು ಅನ್ವಯಿಸುವುದು ಬೇಡ. ಇನ್ನೊಬ್ಬರಿಗೆ ಕೇಡು ಮಾಡುವುದರ ಸಲುವಾಗಿ ಅವರಲ್ಲಿ ತಪ್ಪು ಹುಡುಕುವುದು ನಮಗೆ ಬೇಡ. ಕೊನೆಯದಾಗಿ, ೬೦ ವರ್ಷಗಳ ಅವಿಶ್ರಾಂತ ಶ್ರಮದಿಂದ ಪಡೆದ ಸ್ವಾತಂತ್ರ್ಯಕ್ಕೆ ಅರ್ಹರಾಗಲು ಎಷ್ಟೇ ಕಠಿನವಿದ್ದರೂ ಆ ತೊಂದರೆಗಳನ್ನೆಲ್ಲ ನಾವು ಧೈರ್ಯದಿಂದ ಎದುರಿಸಬೇಕು. ಅವನ್ನು ನೇರವಾಗಿ ಎದುರಿಸುವುದರಿಂದ ನಾವು ಹೆಚ್ಚು ಅರ್ಹರೂ ಉದಾತ್ತ ಗುಣಸಂಪನ್ನರೂ ಆಗಬಲ್ಲೆವು.

### ಬಹುಸಂಖ್ಯಾಕರ ಕರ್ತವ್ಯ

ಎಲ್ಲರೂ ದ್ರೋಹಿಗಳಾಗಿರುವರೆಂದು ಅಲ್ಪಸಂಖ್ಯಾಕರನ್ನು ಕೊಲ್ಲುವುದು ಇಲ್ಲವೆ ಓಡಿಸುವುದು ನಿಜವಾಗಿಯೂ ಬಹುಸಂಖ್ಯಾಕರ ಹೇಡಿತನವನ್ನು ತೋರಿಸುತ್ತದೆ. ಅಲ್ಪಸಂಖ್ಯಾಕರ ಹಕ್ಕುಗಳ ಬಗ್ಗೆ ಸೂಕ್ಷ್ಮವಾಗಿ ಎಚ್ಚರದಿಂದ ಮನ್ನಣೆ ಕೊಡುವುದು ಬಹುಸಂಖ್ಯಾಕರಿಗೊಪ್ಪುವಂಥದು ಅವನ್ನು ತಿರಸ್ಕರಿಸಿದರೆ ಬಹುಸಂಖ್ಯಾಕರು ಅಪಹಾಸ್ಯಕ್ಕೆಗುರಿಯಾಗುವರು. ಅಚಂಚಲ ಆತ್ಮವಿಶ್ವಾಸ ಹಾಗೂ (ನಿಜವಾದ ಇಲ್ಲವೆ ಮೋಸದ) ಪ್ರತಿಭಟನಲ್ಲಿ ಧೀರ ಸಹಜವಾದ ನಂಬಿಗೆ ಇದೇ ಅತ್ಯುತ್ತಮ ಆತ್ಮರಕ್ಷಣೋಪಾಯ ಆದುದರಿಂದ ನನ್ನ ಎಲ್ಲ ನಿಷ್ಠೆಯನ್ನೂ ಕೇಂದ್ರೀಕರಿಸಿ ಬೇಡಿಕೊಳ್ಳುತ್ತೇನೆ. ದಿಲ್ಲಿಯ ಎಲ್ಲ ಮುಸಲ್ಮಾನ, ಹಿಂದು, ಶೀಖರೂ ಒಟ್ಟಿಗೆ ಸೇರಿ ಪರಸ್ಪರ ಆಲಿಂಗನಮಾಡಿ ಹಿಂದುಸ್ತಾನದ ಉಳಿದ ಭಾಗಗಳೆದುರು ಉದಾತ್ತ ಉದಾಹರಣವನ್ನು ಪ್ರದರ್ಶಿಸಬೇಕು, ಇಡೀ ಜಗತ್ತಿನೆದುರೆಂದು ಹೇಳಿದರೂ ಸರಿಯೆ! ಹಿಂದುಸ್ತಾನದ ಉಳಿದ ಭಾಗಗಳಲ್ಲಿ ಏನು ಮಾಡಿದ್ದಾರೆ ಎಂಬುದರತ್ತ ದಿಲ್ಲಿ ಲಕ್ಷ್ಯ ಕೊಡಬಾರದು. ಆಗಮಾತ್ರ ವೈಯಕ್ತಿಕ ಸೇಡು ಪ್ರತೀಕಾರಗಳ ಚಕ್ರನೇಮಿಕ್ರಮದಿಂದ ಮುಕ್ತವಾದ ಹೆಮ್ಮೆತನಗುಂಟೆಂದು ಅದು ಹೇಳಿಕೊಳ್ಳಬಲ್ಲುದು. ಪ್ರತೀಕಾರವೆಂಬುದೊಂದಿದ್ದರೆ ಅದು ಸರಕಾರಕ್ಕೆ ಸೇರಿದ್ದಲ್ಲದೆ ವೈಯಕ್ತಿಕ ನಾಗರಿಕರದಲ್ಲ.

### ಎಲ್ಲರೆದುರು ತಪ್ಪೊಪ್ಪಿಕೊಂಬುದು

ಪ್ರಾರ್ಥನಾ ನಂತರ ಮಾತಾಡುತ್ತ, ಹಿಂದಿನ ದಿನ ಶ್ರೀಮನು ಗಾಂಧಿ ಮತ್ತು ಆಭಾ ಗಾಂಧಿಗಳು ಓದಿ ಹೇಳಿದ ಕ್ಷಮಾಯಾಚನೆಯತ್ತ ಗಾಂಧೀಜಿ ಹೊರಳಿದರು. ಆದಿತ್ಯವಾರ ಸಂಜೆ ಪ್ರಾರ್ಥನೆಯಲ್ಲಿ ಭಜನೆಗಳನ್ನು ಹಾಡುತ್ತಿದ್ದಾಗ ಅವರು ಲಯತಪ್ಪಿಹೋದರು ಮತ್ತು ಆ ಕಾರಣದಿಂದ ತಮ್ಮ ನಗೆಯನ್ನು ಅವರು ತಡೆಯಲಾರದಾದರು. ಅದು ನನಗೆ ಬಹಳ ವ್ಯಥೆಯನ್ನುಂಟು ಮಾಡಿತು. ಹುಡುಗಿಯರಿಗೆ ಪ್ರಾರ್ಥನೆಯ ಪ್ರಾಮುಖ್ಯದ ಅರಿವಾಗಿಲ್ಲವೆಂಬುದನ್ನದು ತೋರಿಸುತ್ತದೆ. ಆ ನಂತರ ಅವರು ನನ್ನ ಹತ್ತಿರ ಕ್ಷಮೆ ಯಾಚಿಸಿದರು. ಕ್ಷಮಾಯಾಚನೆಯನ್ನು ಅವರು ಮಾಡಬೇಕಾಗಿದ್ದಿಲ್ಲ. ನಾನು ಅವರ ಮೇಲೆ ಸಿಟ್ಟಾಗಿದ್ದಿಲ್ಲ. ನನ್ನ ಮೇಲೆ ನನಗೆ ಸಿಟ್ಟುಬಂತು. ನಾನೇ ಅವರನ್ನು ಲಾಲನೆಪಾಲನೆ ಮಾಡಿದರೂ ಪ್ರಾರ್ಥನೆಯ ಕಾಲದಲ್ಲಿ ದೇವರಲ್ಲಿ ಲೀನವಾಗಬೇಕೆಂಬುದನ್ನು ಅವರಿಗೆ ಮುಂದಟ್ಟು ಮಾಡಿಕೊಡಲಾರದಾದೆನಲ್ಲ ಎಂದು. ಹುಡುಗಿಯರು ಪಶ್ಚಾತ್ತಾಪ ಪಟ್ಟುದು ನನಗೆ ಸಮಾಧಾನಕರ. ಅವರು ಎಲ್ಲರೆದುರು ತಮ್ಮ ತಪ್ಪನ್ನೊಪ್ಪಿಕೊಳ್ಳಬೇಕು. ( ಸಂತೋಷದಿಂದ ಹುಡುಗಿಯರದನ್ನೊಪ್ಪಿದರು ). ಪ್ರಾಮಾಣಿಕವಾಗಿ ಎಲ್ಲರೆದುರು ಅಪರಾಧವೊಪ್ಪಿಕೊಂಡರೆ ಮತ್ತೆ ಅಂತಹ ಅಪರಾಧವನ್ನು ಮಾಡದಂತೆ ಆ ವ್ಯಕ್ತಿಯನ್ನು ಅದು ಸಂರಕ್ಷಿಸುತ್ತದೆಂದು ನನ್ನ ನಂಬಿಗೆ.

### ಜ್ಞಾನರತ್ನಗಳು

ಕುರಾನಿನ ಪಠನವನ್ನು ವಿರೋಧಿಸಿದುದರತ್ತ ತಿರುಗಿ ಗಾಂಧೀಜಿ— ಪಾಕಿಸ್ತಾನದಲ್ಲಿ ಹಿಂದು ಶೀಖರಿಗಾಗುತ್ತಿದ್ದ ಅನ್ಯಾಯವನ್ನು ನಿಷೇಧಿಸಬಹುದಾದರೂ ಆ ಕಾರಣದಿಂದ ಕುರಾನಿನ ಪಠನವನ್ನು ನಿಷೇಧಿಸಬಾರದು. ಗೀತೆ, ಕುರಾನು, ಬೈಬಲ್ಲು, ಗುರುಗ್ರಂಥಸಾಹೇಬ, ಜೆಂದವೆಸ್ತಗಳ ಅನುಯಾಯಿಗಳು ಅವುಗಳ ಉಪದೇಶಗಳನ್ನು ಪಾಲಿಸದಿದ್ದರೂ ಅವು ಜ್ಞಾನರತ್ನಗಳ ಕಣಿಗಳೆಂಬುದನ್ನು ಯಾರೂ ಮರೆಯತಕ್ಕದ್ದಲ್ಲ ಎಂದು ಅಭಿಪ್ರಾಯಪಟ್ಟರು.

### ವೀರಮರಣಕಲೆ

ದಿನದ ಕೆಲಸಗಳತ್ತ ಗಮನವೀಯುತ್ತ ಗಾಂಧೀಜಿ ಹೇಳತೊಡಗಿದರು.—

ನಾನು ರಾವಲಪಿಂಡಿ ಮತ್ತು ಬಾರಾಗಡ ಖಾನೆಗಳಿಂದ ಬಂದ ಹಿಂದು ಶೀಖ ಮಂಡಲಗಳನ್ನು ಕಂಡೆ. ಹಿಂದು ಶೀಖರು ರಾವಲಪಿಂಡಿಯನ್ನು ಅದಿದ್ದಂತೆ ಮಾಡಿದರು. ಅಲ್ಲಿ ಅವರೆಲ್ಲರೂ ಚೆನ್ನಾಗಿದ್ದರು. ಇಂದು ಅವರು ಮನೆಮಾರಿಲ್ಲದ ನಿರಾಶ್ರಿತರಾಗಿದ್ದಾರೆ. ಆದರಿಂದ ನಾನು ತೀಕ್ಷ್ಣವ್ಯಥೆಗೊಳಗಾಗಿದ್ದೇನೆ. ಹಿಂದು ಶೀಖರಲ್ಲದಿದ್ದರೆ ಇನ್ನಾರು ಲಾಹೋರು ನಗರವನ್ನು ಅದಿದ್ದಂತೆ ಮಾಡಿದವರು? ಅವರು ಸ್ವದೇಶಭ್ರಷ್ಟರಾಗಿದ್ದಾರೆ. ಹಾಗೇ ದಿಲ್ಲಿಯ ನಿರ್ಮಾಣಕ್ಕೆ ಮುಸ್ಲಿಮರೇನು ಕಡಿಮೆ ಕೆಲಸಮಾಡಿಲ್ಲ. ಹೀಗೆ ಎಲ್ಲ ಜಾತಿಯವರೂ ಹಿಂದುಸ್ತಾನವನ್ನು ಆಗಸ್ಟ ೧೫ ರಲ್ಲಿ ಅದು ಇದ್ದಂತೆ ಕಟ್ಟಲು ದುಡಿದಿದ್ದಾರೆ. ಪಾಕಿಸ್ತಾನದ ಅಧಿಕಾರಿಗಳು ಅಲ್ಲಿ ಎಲ್ಲೆಡೆ ಉಳಿದ ಹಿಂದು ಶೀಖರಿಗೆ ಸಂರಕ್ಷಣೆಯ ಆಶ್ವಾಸನ ಕೊಡಬೇಕು. ಅವರವರ ಅಲ್ಪಸಂಖ್ಯಾಕರಿಗಾಗಿ ಆ ರೀತಿಯ ಸಂರಕ್ಷಣೆಬೇಕೆಂಬುದು ಎರಡೂ ಸಾಮಂತ ರಾಜ್ಯಗಳ ಕರ್ತವ್ಯ. ರಾವಲಪಿಂಡಿಯಲ್ಲಿ ಇನ್ನೂ ೧೮ ಸಾವಿರ ಹಿಂದುಶೀಖರುಳಿದಿರುವರೆಂದೂ ವಾಹ ಶಿಬಿರದಲ್ಲಿ ೩೦ ಸಾವಿರದಷ್ಟು ಹಾಗೇ ನಿಂತಿರುವರೆಂದೂ ನನಗೆ ತಿಳಿದು ಬಂದಿದೆ. ಮನೆಬಿಟ್ಟು ಹೋಗುವದನ್ನು ಬಿಟ್ಟುಬಿಡಬೇಕು. ಪ್ರತಿಯೊಬ್ಬನೂ ಅಲ್ಲೇ ಸತ್ತರೂ ಅಡ್ಡಿ ಇಲ್ಲ. ದೇವರಲ್ಲಿ ಜೀವಂತ ಶ್ರದ್ಧೆಯುಡುವದೊಂದನ್ನುಳಿದು ಧೀರತೆಯಿಂದಲೂ ಗೌರವದಿಂದಲೂ ಸಾಯುವುದಕ್ಕೆ ಮತ್ತಾವ ತರಬೇತೂ ಬೇಕಾಗಿಲ್ಲ. ಹಾಗೆ ಮಾಡಿದರೆ ಅಲ್ಲಿ ಸ್ತ್ರೀಯರ ಅಪಹಾರ ಮತ್ತು ಬಲಾತ್ಕಾರ ಧರ್ಮಾಂತರಗಳೇ ನಡೆಯಲಾರವು. ಆದಷ್ಟು ಜಾಗ್ರತೆಯಾಗಿ ನಾನು ಪಂಜಾಬಿಗೆ ಹೋಗಬೇಕೆಂದು ನೀವೆಲ್ಲರೂ ಆತುರರಾಗಿರುವಿರೆಂಬುದನ್ನು ಬಲ್ಲೆ. ನಾನು ಹಾಗೆ ಮಾಡಬಯಸಿದ್ದೆ. ಆದರೆ ದಿಲ್ಲಿಯಲ್ಲಿ ನಾನು ಸೋತರೆ ಪಾಕಿಸ್ತಾನದಲ್ಲಿ ಹೋಗಿ ನಾನು ಜಯಸಂಪಾದಿಸಲಾರೆ. ದೇವರ ರಕ್ಷಣೆಯಲ್ಲದೆ ಅನ್ಯರಾರ ರಕ್ಷಣೆಯೂ ಇಲ್ಲದೆ ನಾನು ಪಾಕಿಸ್ತಾನದ ಎಲ್ಲ ಪ್ರಾಂತ, ಉಳಿದ ಭಾಗಗಳಿಗೂ ಹೋಗಬೇಕೆಂದಿದ್ದೇನೆ.

—೯ನೇ ಪುಟಕ್ಕೆ

ಕರ್ಮವೀರ ಹರಿಜನ ಪುರವಣಿ

# ಉಪೋಷಣದ ತೊಡಕು

(ಮೋ. ಕ. ಗಾಂಧಿ)

ಗೆಳೆಯನೊಬ್ಬನು ಬರೆಯುತ್ತಾನೆ. "ನಿಮ್ಮ ಜೀವನವನ್ನು ಗಂಡಾಂತರವದಲ್ಲಿ ಹಾಕುವದು ನಿಮಗೆ ಕೊನೆಯ ಮತ್ತು ಸ್ವಾಭಾವಿಕ ಉಪಾಯವಾಗಿ ಪರಿಣಮಿಸಿದೆ. ಅದು ಹಾಗೆ ಆಗಿದ್ದರೂ ರೋಗಿಗೆ ಇಂಜೆಕ್ಶನ ಮಾಡಿ ಇಲ್ಲವೆ ಪ್ರಾಣವಾಯುವನ್ನು ಕೊಟ್ಟು ಜೀವಂತ ಇಡುವ ಉಪಾಯಕ್ಕೆ ಇದು ಹೋಲುವದೆಂದು ನಾನು ತಿಳಿಯದೆ ಇರಲಾರೆ"

ಪ್ರೇಮದ ಮೂಲಕ ಉಂಟಾದ ನೋವಿನಿಂದ ಈ ವಿಚಾರಗಳು ಬಂದಿವೆಂಬುದು ನಿಜ. ಆದರೂ ಬರೆಹಗಾರನು ತನ್ನ ಟೀಕೆಯ ಸಂಬಂಧದಲ್ಲಿ ಬಹಳ ವಿಚಾರ ಮಾಡಿಲ್ಲೆಂದು ನಾನು ಹೇಳಲಿಕ್ಕೆ ಬೇಕಾಗುವದು. ಹಿತೈಷಿಗಳನೇಕರು ಇದೇ ಬಗೆಯ ಅವಸರದ ಅಭಿಪ್ರಾಯವನ್ನು ಕದಾಚಿತ ವ್ಯಕ್ತಪಡಿಸುತಿರಬಹುದು ಆದುದರಿಂದ ಈ ಸಾರ್ವಜನಿಕ ಚರ್ಚೆ. ಟೀಕೆ ಮಾಡಿದವನ ಉದಾಹರಣೆ ಇಲ್ಲಿ ಅನ್ವಯಿಸುವದಿಲ್ಲ. ಇಂಜೆಕ್ಶನ ಕೊಡುವದು ಇಲ್ಲವೆ ಪ್ರಾಣವಾಯುವನ್ನು ಕೊಡುವದು ದೇಹಧಾರಣಕ್ಕಾಗಿ ಮಾಡಿದ ಬಾಹ್ಯ ಉಪಾಯಗಳು. ಆದುದರಿಂದ ಅವು ತಾತ್ಪೂರ್ತಿಕ ಮೌಲ್ಯದವೆಂದು ಸರಿಯಾಗಿಯೆ ವರ್ಣಿಸಲ್ಪಟ್ಟಿವೆ. ಈ ಉಪಾಯಗಳನ್ನು ಮಾಡದಿದ್ದರೆ ಯಾವ ಹಾನಿಯೂ ಆಗಲಾರದು. ಪಂಚಭೂತಾತ್ಮಕ ದೇಹವನ್ನು ಅಮರವನ್ನಾಗಿ ಎಂದೂ ಮಾಡಲಾಗದು. ವೈದ್ಯಕೀಯ ಉಪಾಯಗಳಿಂದ ಕೇವಲ ಕೆಲ ದಿನಗಳ ಮಟ್ಟಿಗೆ ಮಾತ್ರ ಮುಂದಕ್ಕೆ ಹಾಕಬಹುದು; ತಾತ್ಪೂರ್ತಿಕವಾಗಿ ಮುಂದಕ್ಕೆ ಹಾಕುವುದರಿಂದ ಶಾಶ್ವತವಾದ ಕಲ್ಯಾಣವೆಂದಿಗೂ ಆಗದು.

ತದ್ವಿರುದ್ಧವಾಗಿ ಉಪವಾಸವು ಎರಡನೆಯವರ ದೇಹದ ಮೇಲೆ ಪರಿಣಾಮವನ್ನುಂಟು ಮಾಡುವುದಕ್ಕಾಗಿ ಎಂದಿಗೂ ಇರುವುದಿಲ್ಲ. ಅದು ಅವನ ಹೃದಯವನ್ನೆ ಮುಟ್ಟತಕ್ಕದ್ದು. ಆದುದರಿಂದ ಅದು ಆತ್ಮಕ್ಕೆ ಸಂಬಂಧಿಸಿದೆ. ಮತ್ತು ಈ ಅರ್ಥದಲ್ಲಿ ಪರಿಣಾಮವು ತಾತ್ಪೂರ್ತಿಕವಾಗಿದೆಯೆಂದು ಹೇಳಲಿಕ್ಕಾಗದು. ಇದು ಶಾಶ್ವತ ಸ್ವರೂಪದ್ದು. ಆಧ್ಯಾತ್ಮಿಕ ದೃಷ್ಟಿಯಿಂದ ಅವನು ಅದಕ್ಕೆ ಯೋಗ್ಯನಾಗಿರುವನೋ, ಆ ಉಪಾಯವನ್ನು ಅವನು ಯೋಗ್ಯರೀತಿಯಿಂದ ಮಾಡಿಕೊಂಡಿರುವನೊ ಎಂಬ, ಮಾತು ಬೇರೆ. ಸದ್ಯಕ್ಕೆ ಅದು ಪ್ರಸ್ತುತವಲ್ಲ.

ನನ್ನ ಸ್ಮರಣೆಯಲ್ಲಿರುವ ಎಲ್ಲ ಉಪವಾಸಗಳಲ್ಲಿ ಒಂದು ಉಪವಾಸದ ಬಗ್ಗೆ ಮಾತ್ರ ಹೀಗೆ ಹೇಳಬಲ್ಲೆನು. ಆ ಉಪವಾಸದ ವಿಚಾರದಲ್ಲಿ ದೋಷವೇನು ಇರದಿದ್ದರೂ ಪ್ರತಿನಿವೇದನದ ಬಾಹ್ಯ ಉಪಾಯಗಳಿಂದ ಮಿಶ್ರವಾಗಿದ್ದಿತು. ಈ ತಪ್ಪನ್ನು ಮಾಡಿರದಿದ್ದರೆ ಉಳಿದ ಉಪೋಷಣಗಳಲ್ಲಿಯಂತೆ ಈ ಉಪೋಷಣದಿಂದಲೂ ಸ್ವಾಭಾವಿಕವಾದ ಲಾಭವಾಗುತಿದ್ದಿತೆಂಬಲ್ಲಿ ಸಂದೇಹವಿಲ್ಲ. ರಾಜಕೋಟದ ದಿವಂಗತ ಠಾಕೂರ ಸಾಹೇಬರ ವಿರುದ್ಧ ಮಾಡಿದ ಉಪೋಷಣವನ್ನೇ ನಾನು ಇಲ್ಲಿ ಉಲ್ಲೇಖಿಸುತ್ತೇನೆ. ನನಗೆ ನನ್ನ ತಪ್ಪು ಗೊತ್ತಾಯಿತು. ನನ್ನ ಹೆಜ್ಜೆಯನ್ನು ಹಿಂದೆಗೆದುಕೊಂಡು ಗಂಡಾಂತರವನ್ನು ತಪ್ಪಿಸಿದೆನು. ಕೊನೆಯ ಉಪೋಷಣವು ಕಳೆದ ಸಪ್ಟೆಂಬರದಲ್ಲಿ ಕಲಕತ್ತೆಯಲ್ಲಿ ಮಾಡಿದ್ದು. ಪರಿಣಾಮವು ಅಪೇಕ್ಷಿಸಿದಂತೆಯೇ ನಿಶ್ಚಯವಾಗಿ ಆಯಿತು. ಅದರ ಸಾರವನ್ನನುಲಕ್ಷಿಸಿ ಅದರ ಪರಿಣಾಮ ಶಾಶ್ವತವಾಗಿದೆಂದು ನಾನು ಭಾವಿಸುತ್ತೇನೆ. ಅದೇ ಪರಿಣಾಮವು ಶಾಶ್ವತವಾದುದೊ ಅಲ್ಲವೊ ಎಂಬುದನ್ನು ಕಾಲವೇ ಸಿದ್ಧಪಡಿಸಬಲ್ಲುದು. ಉಪೋಷಣಮಾಡುವ ಮನುಷ್ಯನ ವಿಶುದ್ಧಿ ಮತ್ತು ಅವನ ನಿರ್ದಿಷ್ಟ ತಿಳುವಳಿಕೆಯನ್ನೆ ಅದು ಅವಲಂಬಿಸುವದು. ಅದರ ವಿಚಾರವು ಇಲ್ಲಿ ಅಪ್ರಸ್ತುತ. ಅಲ್ಲದೆ ಉಪವಾಸ ಮಾಡುವ ಮನುಷ್ಯನೇ ಆ ವಿಚಾರಣೆಯನ್ನು ನಡೆಸಲು ತಕ್ಕವನಲ್ಲ. ಯೋಗ್ಯ ನಿಷ್ಪಕ್ಷಪಾತ ಮನುಷ್ಯನು ಅದನ್ನು ಮಾಡಬಲ್ಲನು ಅದೂ ನನ್ನ ಮರಣಾನಂತರವೆ.

(ಗುಜರಾಥಿಯಿಂದ ಅನುವಾದಿತ)

ಹೊಸದಿಲ್ಲಿ ೨೫—೮—೪೭

# ಹಿಂದುಸ್ತಾನಿ

(ಮೋ. ಕ. ಗಾಂಧಿ)

ಶ್ರೀ ಕಾಕಾಸಾಹೇಬ ಕಾಲೇಲಕರರು ಬರೆಯುತ್ತಾರೆ:—

"ಹಿಂದೀ ಒಕ್ಕೂಟದಲ್ಲಿರುವ ಮುಸಲ್ಮಾನರು ಹಿಂದೀ ಒಕ್ಕೂಟಕ್ಕೆ ತಮ್ಮ ನಿಷ್ಠೆಯನ್ನು ದೃಢಪಡಿಸಿದ್ದಾದರೆ ಅವರು ಹಿಂದುಸ್ತಾನಿಯನ್ನು ರಾಷ್ಟ್ರೀಯ ಭಾಷೆಯನ್ನಾಗಿ ಒಪ್ಪಿ ಉರ್ದು ಮತ್ತು ನಾಗರಿ ಲಿಪಿಯನ್ನು ಕಲಿಯುವರೋ? ಈ ಸಂಬಂಧದಲ್ಲಿ ನೀವು ನಿಮ್ಮ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಪಡಿಸದಿದ್ದರೆ ಹಿಂದುಸ್ತಾನೀ ಪ್ರಚಾರ ಸಭೆಯ ಕಾರ್ಯವು ಬಹಳ ಕಠಿನವಾಗುವುದು. ಈ ವಿಷಯದಲ್ಲಿ ಮೌಲಾನಾ ಅಬುಲ್ ಕಲಂ ಅಝಾದ ಸಾಹೇಬರೂ, ತಮ್ಮ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಪಡಿಸಲಾರರೋ?"

ಕಾಕಾಸಾಹೇಬರು ತಮ್ಮ ಪತ್ರದಲ್ಲಿ ಹೊಸದೇನನ್ನೂ ಹೇಳಿರುವುದಿಲ್ಲ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಈ ವಿಷಯಕ್ಕೆ ಹೆಚ್ಚಿನ ಮಹತ್ವವು ಬಂದಿದೆ. ಹಿಂದುಸ್ತಾನದಲ್ಲಿಯ ಮುಸಲ್ಮಾನರು ಹಿಂದುಸ್ತಾನಕ್ಕೆ ನಿಷ್ಠರಾಗುಳಿದರೆ ಮತ್ತು ಸ್ವತಃ ಮನಃಪೂರ್ವಕವಾಗಿ ಹಿಂದುಸ್ತಾನವೇ ತಮ್ಮ ಮನೆಯೆಂದು ತಿಳಿದುಕೊಂಡದ್ದಾದರೆ ಎರಡೂ ಲಿಪಿಗಳನ್ನು ಕಲಿಯುವದು ಅವರ ಕರ್ತವ್ಯವಾಗಿದೆ. ಪಾಕಿಸ್ತಾನದಲ್ಲಿ ಹಿಂದುಗಳಿಗೆ ಸ್ಥಾನವಿಲ್ಲೆಂದು ಹೇಳಲಾಗುತ್ತದೆ; ಆದುದರಿಂದ ಅವರು ಹಿಂದೀ ಒಕ್ಕೂಟಕ್ಕೆ ಗುಳೇ ಹೋಗುತಿರುವರು. ಹಿಂದೀ ಒಕ್ಕೂಟ ಮತ್ತು ಪಾಕಿಸ್ತಾನಗಳಲ್ಲಿ ಯುದ್ಧ ಸಂಭವಿಸಿದ್ದಾದರೆ ಹಿಂದುಸ್ತಾನದಲ್ಲಿರುವ ಮುಸಲ್ಮಾನರು ಪಾಕಿಸ್ತಾನದ ವಿರುದ್ಧ ಹೋರಾಡಲು ಸಿದ್ಧರಾಗಬೇಕು. ಎರಡೂ ಸಾಮಂತ ರಾಷ್ಟ್ರಗಳಲ್ಲಿ ಯುದ್ಧವಾಗತಕ್ಕದ್ದಲ್ಲ ಎಂಬ ಮಾತು ನಿಜ. ಅವರು ಮಿತ್ರರಾಗಿಯೆ ಬಾಳತಕ್ಕದ್ದು. ಇಲ್ಲವೆ ಸಾಯುವಾಗಲೂ ಮಿತ್ರರಂತೆ ಸಾಯತಕ್ಕದ್ದು. ಇಬ್ಬರೂ ಪರಸ್ಪರ ನಿಕಟ ಸಹಕಾರದಿಂದ ವರ್ತಿಸತಕ್ಕದ್ದು. ಪರಸ್ಪರರು ಸ್ವತಂತ್ರರಾಗಿದ್ದರೂ ಇಬ್ಬರಲ್ಲಿಯೂ ಅನೇಕ ವಿಷಯಗಳು ಸಾಮಾನ್ಯವಾಗಿವೆ. ಅವರು ಶತ್ರುಗಳಾಗಿದ್ದರೆ ಇಬ್ಬರಲ್ಲಿ ಯಾವದೂ ಸಾಮಾನ್ಯವಾಗಿರಲಾರದು. ನಿಜವಾದ ಗೆಳೆತನ ಪರಸ್ಪರರಲ್ಲಿ ಇದ್ದರೆ ಎರಡೂ ರಾಷ್ಟ್ರಗಳಿಗೆ ನಿಷ್ಠರಾಗಿಯೆ ಉಳಿಯಬಲ್ಲರು. ಇಬ್ಬರೂ ಒಂದೇ ಸಾಮಂತ ರಾಷ್ಟ್ರಮಂಡಳದ ಸದಸ್ಯರು. ಅಂದ ಬಳಿಕ ಪರಸ್ಪರರು ಹೇಗೆ ಶತ್ರುಗಳಾಗಬಲ್ಲರು? ಆದರೆ ಆ ಚರ್ಚೆ ಇಲ್ಲಿ ಅಪ್ರಸ್ತುತ.

ಹಿಂದೀ ಒಕ್ಕೂಟವು ಸಾಮಾನ್ಯವಾದ ಅಂತರ್ ಪ್ರಾಂತೀಯ ಭಾಷೆಯೊಂದನ್ನು ಇಟ್ಟುಕೊಳ್ಳಬೇಕಾಗಿದೆ. ನಾನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಎರಡೂ ರಾಷ್ಟ್ರಗಳು ಗೆಳೆಯ ರಾಷ್ಟ್ರಗಳಾಗಿವೆ. ಎರಡೂ ರಾಷ್ಟ್ರಗಳಿಗೆ ಹಿಂದುಸ್ತಾನಿಯೆ ಸಾಮಾನ್ಯವಾದ ಬಳಕೆಯ ಭಾಷೆಯಾಗಬೇಕೆಂದು ಹೇಳಬಯಸುತ್ತೇನೆ. ಹಿಂದೀ ಮತ್ತು ಉರ್ದು ಎರಡು ಪ್ರತ್ಯೇಕ ಭಾಷೆಗಳಾಗಿ ಉಳಿಯಬಾರದೆಂದು ಇದರ ಅರ್ಥವಲ್ಲ. ಅವು ಸ್ವತಂತ್ರವಾಗಿ ಇರಲಿಕ್ಕೆ ಬೇಕು ಮತ್ತು ಪ್ರಗತಿಯನ್ನು ಪಡೆಯಲಿಕ್ಕೆ ಬೇಕು. ಹಿಂದುಸ್ತಾನದಲ್ಲಿಯ ಹಿಂದುಗಳು ಮತ್ತು ಮುಸಲ್ಮಾನರು ಅಥವಾ ಎಲ್ಲ ಧರ್ಮಗಳ ಜನರು ಮಿತ್ರರಾಗಿದ್ದರೆ, ಹಿಂದೀ ಮತ್ತು ಉರ್ದುವಿನ ಸಮ್ಮಿಶ್ರ ಭಾಷೆಯನ್ನು ಸ್ವೀಕರಿಸಲಿಕ್ಕೆ ಬೇಕು. ಎರಡೂ ಲಿಪಿಗಳನ್ನು ಅವರು ಕಲಿಯಲಿಕ್ಕೆ ಬೇಕು. ಹಿಂದೀ ಒಕ್ಕೂಟದಲ್ಲಿಯ ಹಿಂದೂ ಮುಸಲ್ಮಾನರ ಸತ್ವಪರೀಕ್ಷೆಯ ಕಾಲವಿದು. ಒಕ್ಕೂಟದಲ್ಲಿಯ ಮುಸಲ್ಮಾನರು ನಾಗರೀ ಲಿಪಿಯನ್ನು ಕಲಿಯಲಿ, ಕಲಿಯದಿರಲಿ ಹಿಂದುಗಳು ಮತ್ತು ಉಳಿದ ಜಾತಿಯ ಜನರು ಎರಡೂ ಲಿಪಿಗಳನ್ನು ಕಲಿಯಲಿಕ್ಕೆ ಬೇಕು.

ಇಂದಿನ ಈ ವಿಷಮಯ ವಾತಾವರಣದಲ್ಲಿ ಈ ಸರಳ ಪ್ರತಿಪಾದನೆಯನ್ನು ಜನರು ಮೆಚ್ಚದಿರುವದು ಸ್ವಾಭಾವಿಕ. ಬಯಸಿದರೆ ಹಿಂದುಗಳು ಉರ್ದು ಲಿಪಿಯನ್ನು ಮತ್ತು ಉರ್ದು ಶಬ್ದಗಳನ್ನು ಬಹಿಷ್ಕರಿಸಬಲ್ಲರು. ಆದರೆ ಅದರಿಂದ ಎಲ್ಲರೂ ಹಾನಿಗೆ ಒಳಗಾಗುವರು. ಆದುದರಿಂದ ಹಿಂದುಸ್ತಾನಿ ಪ್ರಚಾರ ಕಾರ್ಯದಲ್ಲಿ ತೊಡಗಿದವರು ತಮ್ಮ ನಿಷ್ಠೆಯನ್ನು ಕಳೆದುಕೊಳ್ಳತಕ್ಕದ್ದಲ್ಲ ಮತ್ತು ಪ್ರಯತ್ನಗಳನ್ನು ಬಿಡತಕ್ಕದ್ದಲ್ಲ. ಹಿಂದೀ ಒಕ್ಕೂಟದಲ್ಲಿರುವ ಮೌಲಾನಾ ಆಝಾದ ಮತ್ತು ಉಳಿದ ಪ್ರಮುಖ ಮುಸಲ್ಮಾನ ಮುಂದಾಳುಗಳು ಹಿಂದುಸ್ತಾನಿಯನ್ನು ಮತ್ತು ಎರಡೂ ಲಿಪಿಗಳನ್ನು ಸ್ವೀಕರಿಸಲು ಎಲ್ಲರಿಗಿಂತ ಮೊದಲು ಮುಂದೆ ಬರಬೇಕೆಂಬುದು ನಿಜ. ಅವರು ಧುರೀಣತ್ವ ವಹಿಸದಿದ್ದರೆ ಮತ್ತಾರು ವಹಿಸತಕ್ಕದ್ದು.? ಕಠಿನ ದಿನಗಳನ್ನು ನಾವೀಗ ಕ್ರಮಿಸತಿರುವೆವು. ಪರಮಾತ್ಮನು ನಮಗೆ ನಿಜವಾದ ಮಾರ್ಗದರ್ಶನ ಮಾಡಲಿ.

(ಹಿಂದುಸ್ತಾನಿಯಿಂದ ಅನುವಾದಿತ)

ಹೊಸದಿಲ್ಲಿ ೨೭-೮-೪೭

# ಭಾರೀ ಉದ್ಯೋಗಗಳು ಮತ್ತು ಮಾನವೀ ಅಭಿವೃದ್ಧಿ

ಕೈಗೆಲಸವೆ ಶಿಕ್ಷಣದ ಮಾಧ್ಯಮವಾಗಿರಬೇಕೆಂದು ನಾವು ಮೇಲಿಂದ ಮೇಲೆ ಪ್ರತಿಪಾದಿಸುತ್ತ ಬಂದಿದ್ದೇವೆ. ಕೆಲಸದ ಮೂಲಕವೆ ಮನುಷ್ಯನು ತನ್ನ ವಿಚಾರಗಳನ್ನು ವ್ಯಕ್ತಪಡಿಸುವುದುಂಟು. ತನ್ನ ಸುತ್ತಲಿನ ಪರಿಸ್ಥಿತಿಯನ್ನು ಮತ್ತು ತಾನು ಮಾಡುತಿರುವ ಕೆಲಸದ ತಂತ್ರವನ್ನು ಕಲಿಯುವದೂ ಅದರ ಮೂಲಕವೆ. ಯೋಗ್ಯರೀತಿಯಿಂದ ನಿರ್ದೇಶಿಸಿದ್ದಾದರೆ ಮಾನವನು ಪರಿಪೂರ್ಣವಾಗಿ ಅಭಿವೃದ್ಧಿ ಹೊಂದಬೇಕಾದರೆ ಕೆಲಸವೇ ಮುಖ್ಯ ಸಾಧನವಾಗಿರತಕ್ಕದ್ದು. ಈ ತತ್ವವನ್ನನುಲಕ್ಷಿಸಿಯೆ ತಾಲೀಮಿ ಸಂಘವು ಕೈಗಾರಿಕೆಯ ಮೂಲಕ ಶಿಕ್ಷಣದ ತಂತ್ರವನ್ನು ಅಭಿವೃದ್ಧಿಪಡಿಸುತಿರುವದು.

ಯೋಗ್ಯರೀತಿಯಲ್ಲಿ ಕೆಲಸವನ್ನು ಕೊಡದಿದ್ದರೆ ಕೆಲಸಗಾರನ ಅಭಿವೃದ್ಧಿಯು ಏಕಪಕ್ಷೀಯವಾಗುವದು. ಯಾವ ದೇಶಗಳಲ್ಲಿ ಕೈಗಾರಿಕೆಗಳ ಬದಲು ಭಾರೀ ಉದ್ಯೋಗಧಂದೆಗಳು ಅಭಿವೃದ್ಧಿ ಹೊಂದಿರುವವೋ ಆ ದೇಶಗಳಲ್ಲಿ ಈ ಬಗೆಯ ಉದಾಹರಣೆಗಳನ್ನು ಕಾಣಬಹುದು. ಅಮೇರಿಕೆಯಲ್ಲಿ ಈ ಬಗೆಯ ಪರಿಸ್ಥಿತಿಯ ಅತ್ಯುತ್ತಮ ದೃಷ್ಟಾಂತವನ್ನು ಕಾಣಬಹುದು. ಡೇಲ ಕಾರ್ನೇಜರು ಬರೆದ 'ಫಾಯಿವ್ ಮಿನಿಟ್ ಬಾಯೊಗ್ರಫೀಜ' ಎಂಬ ಪುಸ್ತಕದ ೫೫ನೇ ಪುಟದಲ್ಲಿ ಹೀಗೆ ಬರೆಯಲಾಗಿದೆ.

"ಅಮೇರಿಕೆಯ ಆಸ್ಪತ್ರೆಗಳಲ್ಲಿ ಮಾನಸಿಕ ಬೇನೆಯಿಂದ ಬಳಲುತಿರುವ ರೋಗಿಗಳ ಸಂಖ್ಯೆ ಬೇರೆ ಬೇನೆಗಳಿಂದ ಬಳಲುವ ಎಲ್ಲ ರೋಗಿಗಳ ಸಂಖ್ಯೆಗಿಂತ ಹೆಚ್ಚಿರುವದು. ಅಲ್ಲಿ ಶಾಲೆಗೆ ಹೋಗುತಿರುವ ಪ್ರತಿ ೧೬ ವಿದ್ಯಾರ್ಥಿಗಳಿಗೊಬ್ಬ ವಿದ್ಯಾರ್ಥಿ ಇಂದು ಹುಚ್ಚರ ಆಸ್ಪತ್ರೆಯಲ್ಲಿ ಕೆಲಕಾಲ ಕಳೆಯುತಿರುವನು. ನಿಮಗೆ ೧೬ ವರುಷ ವಯಸ್ಸಾಗಿದ್ದರೆ, ನಿಮಗೆ ಮಾನಸಿಕ ರೋಗ ತಗಲಿದೆಂದೂ ನಿಮ್ಮ ಜೀವನದ ೭ ವರುಷಗಳವರೆಗೆ ಹುಚ್ಚರಸಂಸ್ಥೆಯಲ್ಲಿ ಇರುವ ಸಂಭವ ೨೦ಕ್ಕೆ ಒಂದರಷ್ಟಿರುವದೆಂದೂ ತಿಳಿಯಿರಿ. ಕಳೆದ ದಶಕದಲ್ಲಿ ಮಾನಸಿಕ ರೋಗಿಗಳ ಸಂಖ್ಯೆ ಬಹುತಃ ಇಮ್ಮಡಿಯಾಗಿದೆ. ಇನ್ನೊಂದು ಶತಮಾನದವರೆಗೆ ಇದೇ ಪರಿಸ್ಥಿತಿ ಮುಂದರಿದಿದ್ದಾರೆ ಜನಸಂಖ್ಯೆಯ ಅರ್ಧದಷ್ಟು ಜನರು ಹುಚ್ಚರ ಆಸ್ಪತ್ರೆಯಲ್ಲಿರಬೇಕಾಗುವ ಪ್ರಸಂಗ ಬರಬಹುದು. ಮತ್ತು ಉಳಿದ ಅರ್ಧ ಜನಸಂಖ್ಯೆಯ ಜನರು ಕರಗಳನ್ನು ಕೊಟ್ಟು ಅವರನ್ನು ಬೆಂಬಲಿಸುವ ಪ್ರಯತ್ನ ಮಾಡಬೇಕಾಗುವ ಪ್ರಸಂಗ ಬರಬಹುದು."

ಆರೋಗ್ಯ ವಿಷಯಕ ಪತ್ರಿಕೆಗಳಲ್ಲಿಯ ಸಂಗತಿಗಳನ್ನು ಓದಿದ್ದಾದರೆ ಮೇಲಿನ ಹೇಳಿಕೆಯ ಸತ್ಯತೆಯು ಕಂಡು ಬರದಿರಲಾರದು. ಆದರೆ ತೊಂದರೆಯಿಷ್ಟೆ ಲೇಖಕರು ಕಾರಣಗಳನ್ನು ಹುಡುಕುವ ಗೊಡವೆಗೆ ಮಾತ್ರ ಕ್ವಚಿತ್ತಾಗಿ ಹೋಗುವರು.

ಆದುದರಿಂದ ಹಿಂದುಸ್ತಾನದ ಪುನರ್ರಚನೆಯಾಗುವ ಈ ಸಮಯದಲ್ಲಿ ನಮ್ಮ ಯೋಜಕರು ಮಾನವನ ಪಾಶವೀ ಭೌತಿಕ ಅವಶ್ಯಕತೆಗಳನ್ನಷ್ಟೇ ನೆನೆಯದೆ ಅವನ ಶರೀರ, ಮನಸ್ಸು ಮತ್ತು ಆತ್ಮದ ಅವಶ್ಯಕತೆಗಳನ್ನೂ ಮನಸ್ಸಿನಲ್ಲಿಟ್ಟುಕೊಳ್ಳುವರೆಂದು ನಾವು ಆಶಿಸುತ್ತೇವೆ. ಮಾ[illegible] ಅಭಿವೃದ್ಧಿಯ ವಿವಿಧ ಅಂಗೋಪಾಂಗ[illegible] ಗೊಂಡು ನಮ್ಮ ಯೋಜನೆಗಳು [illegible] ವಾಗಿರದಿದ್ದರೆ ಅವು ನಿ[illegible] ಅಲ್ಲ ಮಾನವನ ಪ್ರಗತಿಗೆ [illegible]ಬಂಧಕವಾಗಿಯೂ [illegible] ಅಂತರಂಗದವವು.

೧೩ ನೇ ಪುಟಕ್ಕೆ

# ವಾಹಶಿಬಿರದಲ್ಲಿ ಕಸ್ತೂರಬಾ ನಿಧಿಯ ಕಾರ್ಯಕರ್ತರು

ರಾವಳಪಿಂಡಿಯ ಪಕ್ಕದ ವಾಹ ಶಿಬಿರದಲ್ಲಿ ನಾಲ್ಕುವಾರ ದಿವಾರ ಮಾಡಿದಾಗ ಕಸ್ತೂರಬಾ ನಿಧಿಯ ಹುಡಿಗೆಯರೊಡನೆ ಇದ್ದೆ. ಈ ಹುಡುಗೆಯರು ಪ್ರಾರಂಭದಿಂದಲೂ ಈ ಶಿಬಿರದಲ್ಲಿ ಕೆಲಸ ಮಾಡುತಿರುವರು. ಸಿಯಾಲಕೋಟದ ಶ್ರೀಮತಿ ವಿದ್ಯಾವತಿಜಿಯವರು ಕಪಾದಾರದಲ್ಲಿ ಗ್ರಾಮಸೇವಿಕೆಯರ ಶಿಕ್ಷಣ ಶಿಬಿರವನ್ನು ನಡೆಸಿಕೊಂಡು ಬರುತಿದ್ದರು. ವಿದ್ಯಾವತಿಯವರನ್ನು ಹಿರಿಯ ಕಿರಿಯರೆಲ್ಲರೂ ಪ್ರೀತಿಯಿಂದ 'ದೀದಿ' ಯೆಂದು ಕರೆಯುತಿದ್ದರು. ಕಳೆದ ಮಾರ್ಚದಲ್ಲಿ ಸಂಭವಿಸಿದ ಹತ್ಯಾಕಾಂಡದ ನಂತರ ಅವಳು ಶ್ರೀಮತಿ ರಾಮೇಶ್ವರಿ ನೆಹರು ಇವರೊಡನೆ ವಾಹ ಶಿಬಿರವನ್ನು ಮತ್ತು ರಾವಳಪಿಂಡಿಯ ದೊಂಬಿಗಾಹುತಿಯಾದ ಭಾಗವನ್ನು ಸಂದರ್ಶಿಸಿದಳು. ನೋಡಿದ ದೃಶ್ಯಗಳಿಂದ ಮತ್ತು ಕೇಳಿದ ಕತೆಗಳಿಂದ ಅವಳಿಗೆ ಭಯಂಕರ ಆಘಾತವಾಯಿತು. ತಾನು ಪಂಜಾಬದ ಪುತ್ರಿ ಮತ್ತು ಸಾಮಾಜಿಕ ಕಾರ್ಯಕರ್ತಳಾದ್ದರಿಂದ ರಾವಳಪಿಂಡಿಯಲ್ಲಿ ದುಃಖಿತರಾದವರಿಗೆ ಸಹಾಯ ಸಲ್ಲಿಸುವದು ಕರ್ತವ್ಯವೆಂದು ಭಾವಿಸಿದಳು. ಕೆಚ್ಚಿನಿಂದ ಮುಂಬರಿದು ಸತತ ಪ್ರಯತ್ನ ಮಾಡಿ ಎಲ್ಲ ಬಗೆಯ ಅಡಚಣಗಳನ್ನು ನಿವಾರಿಸಿಕೊಂಡು ವಾಹ ಶಿಬಿರಕ್ಕೆ ಬಂದು ಕೆಲಸಮಾಡಲು ಅಪ್ಪಣೆಯನ್ನು ಪಡೆವಲ್ಲಿ ಯಶಸ್ವಿಯಾದಳು. ಅವಳಿಗೆ ಆರು ಜನರು ಸಹಾಯಕ್ಕಾಗಿ ಬಂದರು. ಅವರಲ್ಲಿ ಐವರು ಕಸ್ತೂರಬಾ ನಿಧಿಯ ಕಾರ್ಯಕರ್ತರು, ಆರನೆಯವರು ಸಿಯಾಲಕೋಟದ ಶ್ರೀಮತಿ ಕೃಷ್ಣಾ ಪಂಜಾ ಎಂಬ ಶಿಕ್ಷಕಿಯು. ಅವರು ಶಿಬಿರದಲ್ಲಿ ಅಮೂಲ್ಯ ಸೇವೆ ಸಲ್ಲಿಸುತಿದ್ದರು. ಪರಿಣಾಮವಾಗಿ ಅತ್ಯಂತ ಲೋಕಪ್ರಿಯರಾಗಿದ್ದರು. ವಾಹ ಶಿಬಿರದಲ್ಲಿ ಆಸ್ಪತ್ರೆಯಲ್ಲಿಯೆ ಪ್ರತಿದಿನ ಸರಾಸರಿ ೧೫೦ ಜನ ಶುಶ್ರೂಷೆ ಹೊಂದುವವರಿರುತಿದ್ದರು. ಅವರೆಲ್ಲರಿಗೆ ಕೂಡಲೆ ಶುಶ್ರೂಷೆಯ ವ್ಯವಸ್ಥೆ ಮಾಡಬೇಕಿದ್ದಿತು. ಪೌಷ್ಟಿಕವಲ್ಲದ ಮತ್ತು ಸದೋಷ ಆಹಾರದಿಂದ ನಿರ್ವಾಸಿತರಲ್ಲಿ ಅನೇಕರು ಕಾಯಿಲೆಯಿಂದ ಬಳಲಬೇಕಾಗಿದ್ದಿತು. ಶುಶ್ರೂಷೆಯಲ್ಲಿ ಮತ್ತು ಹಣ್ಣು ಹಾಲು ಯೋಗ್ಯ ರೀತಿಯಿಂದ ಮತ್ತು ನಿಷ್ಪಕ್ಷಪಾತವಾಗಿ ಎಲ್ಲ ರೋಗಿಗಳಲ್ಲಿ ಹಂಚುವಲ್ಲಿ ಕಸ್ತೂರಬಾ ನಿಧಿಯ ಕಾರ್ಯಕರ್ತರು ವೈದ್ಯಕೀಯ ಜನರಿಗೆ ಅಮೂಲ್ಯ ಸಹಾಯವನ್ನು ಸಲ್ಲಿಸಿದರು. ಆಸ್ಪತ್ರೆಯ ಹೊರಗೆ ಅವರು ಇಡೀ ದಿವಸ ಪರಿಹಾರ ಸಾಮುಗ್ರಿಗಳನ್ನು ಸರಿಯಾಗಿ ಹಂಚುವ ಕಾರ್ಯವನ್ನು ಮಾಡುತಿದ್ದರು. ಎಲ್ಲರಿಗೂ ಸಾಲುವಷ್ಟು ಎಲ್ಲರನ್ನೂ ಸಮಾಧಾನಗೊಳಿಸುವಷ್ಟು ಪದಾರ್ಥಗಳಿಲ್ಲದಿರುವಾಗ ಹಂಚುವದು ಬಹಳ ಕಠಿನವಾಗುತ್ತದೆ. ಅದಕ್ಕೆ ನ್ಯಾಯಬುದ್ಧಿ, ಸಾರಾಸಾರ ವಿಚಾರಶಕ್ತಿ ಬೇಕಾಗುತ್ತಿದೆಯಲ್ಲದೆ ವಿಶಿಷ್ಟತಾಳ್ಮೆ ಮತ್ತು ಜಾಣತನ ಬೇಕಾಗುತ್ತವೆ. ಬೆಳಗು ಮುಂಜಾನೆ ೫ ರಿಂದ ರಾತ್ರಿ ೧೧ರ ವರೆಗೆ ದೀದೀ ಕಾರ್ಯತತ್ಪರಳಾಗಿದ್ದಳು, ಅವಳ ಆರೋಗ್ಯ ಸರಿಯಾಗಿಲ್ಲದಿದ್ದರೂ ಅನೇಕ ಸಲ ಇದಕ್ಕೂ ಹೆಚ್ಚು ಅವಧಿಯ ವರೆಗೆ ಅವಳು ಕೆಲಸ ಮಾಡುತಿದ್ದಳು.

ದೀದಿಯು ನೂಲುವ ವರ್ಗವನ್ನು ನಡೆಸುತಿದ್ದಳು ಮತ್ತು ಹೆಣ್ಣು ಹುಡಿಗೆಯರಿಗಾಗಿ ಎರಡು ವರ್ಗಗಳನ್ನು ತೆರೆದಿದ್ದಳು. ನಿರ್ವಾಸಿತರಲ್ಲಿಯೆ ಆವಳು ಶಿಕ್ಷಕಿಯರನ್ನು ಆರಿಸಿಕೊಂಡಿದ್ದಳು. ಆಸ್ಪತ್ರೆಯಲ್ಲಿ ಸಹಾಯ ಮಾಡುವದಕ್ಕಾಗಿ ನಿರ್ವಾಸಿತರಲ್ಲಿಯೆ ಕೆಲವರನ್ನು ಆರಿಸಿಕೊಂಡು ಅವರನ್ನು ತರಬೇತು ಮಾಡಿದ್ದಳು. ಆಸ್ಪತ್ರೆಯಲ್ಲಿಯ ಮಕ್ಕಳಿಗಾಗಿ ಬಟ್ಟೆಗಳನ್ನು ಹೊಲಿಯುವದನ್ನು ಅವಳು ಯೋಜಿಸಿದ್ದಳು. ಮತ್ತು ಬಹಳ ಹೊಲಸಾದ ಆಸ್ಪತ್ರೆಯ ಗಾದಿ ಮುಂತಾದವುಗಳನ್ನು ಸ್ವಚ್ಛಮಾಡಿ ಮತ್ತೆ ತುಂಬುವ ಕೆಲಸವನ್ನೂ ಸಂಘಟಿಸಿದ್ದಳು. ಪರಿಹಾರ ಸಾಮುಗ್ರಿಗಳ ಹಂಚಿಕೆಯ ಕಾರ್ಯವನ್ನು ಸಾಮಾನ್ಯವಾಗಿ ಕೃಷ್ಣಾಜಿ ಮಾಡುತಿದ್ದಳು. ಆದರೆ ಮುಂಜಾವಿನಿಂದ ರಾತ್ರಿಯ ವರೆಗೆ ಎಣ್ಣೆ ಮತ್ತು ಸಾಬೂನು,

—೧೧ನೇ ಪುಟಕ್ಕೆ

# ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣ

(೯ ನೇ ಪುಟದಿಂದ)

ವ್ಯತ್ಯಾಸವೆಂದರೆ ಬಹುಶಃ ದೇವನಲ್ಲಿರುವ ನನ್ನ ಶ್ರದ್ಧೆ ಉಳಿದವರ ಶ್ರದ್ಧೆಗಿಂತ ಹೆಚ್ಚು ದೃಢವಾಗಿದೆ. ಹಿಂದು, ಸಿಕ್ಖ, ಪಾರಸಿಕ, ಮುಸಲ್ಮಾನ ಕ್ರೈಸ್ತಾನುಯಾಯಿ ಈ ಎಲ್ಲ ಹಿಂದೀಯರೂ ಭಾರತದೇಶಕ್ಕಾಗಿ ಪ್ರಾಣಾರ್ಪಣಮಾಡಲು ಸಿದ್ಧರಿದ್ದರೆ ನಮ್ಮ ನಾಡಿಗೆ ಯಾವ ಹಾನಿಯೂ ಸಂಭವಿಸದು. ನೀವು — 'ಸತ್ಯಮೇವಜಯತೇ ನಾನೃತಂ — ಸತ್ಯಕ್ಕೇ ಜಯ, ಸುಳ್ಳಿಗೆಂದೂ ಇಲ್ಲ' — ಎಂಬ ಋಷಿವಾಕ್ಯವನ್ನು ನೆನಪಿನಲ್ಲಿಡಬೇಕು.

ಬಿರ್ಲಾ ಭವನ, ಹೊಸದಿಲ್ಲಿ ೨೭—೯—೪೭

## ಭಿಷಗ್ರತ್ನ ರಾಮಚಂದ್ರ

ನನಗೆ ಕಾಹಿಲೆಯಾಗಿರುವುದು ಒಂದು ವೃತ್ತಪತ್ರದಲ್ಲಿ ಪ್ರಕಟವಾಗಿದೆ. ಅದು ನನಗೆ ಗೊತ್ತಿಲ್ಲದೆ ಪ್ರಕಟವಾಯಿತು. ಆದರಿಂದ ನನಗೆ ಖೇದವಾಗಿದೆ. ಕಾಹಿಲೆಯು ನನ್ನ ಕೆಲಸಕ್ಕೆ ಭಂಗತರುವಂತಹದಾಗಿರಲಿಲ್ಲ; ಅಲ್ಲದೆ ನಾನು ಅಗಲೆ ಗುಣಹೊಂದುತ್ತಿದ್ದೇನೆ. ಅದಕ್ಕೆ ಅಷ್ಟು ಪ್ರಾಮುಖ್ಯ ಕೊಡಬಾರದಾಗಿತ್ತು. ದೀನಶಾ ಮೇಥಾರು ನನ್ನ ವೈಯಕ್ತಿಕ ವೈದ್ಯರೆಂದು ಹೇಳಲಾಗಿದೆ. ಅದು ತಪ್ಪು. ಆ ಹೇಳಿಕೆಗೆ ತಾವು ಹೊಣೆಗಾರರಲ್ಲವೆಂದು ಅವರಾಗಲೇ ಹೇಳಿಬಿಟ್ಟಿದ್ದಾರೆ. ಅವರನ್ನೇನೋ ನಾನು ಕರೆದಿದ್ದೆ. ಆದರೆ ಅದು ಔಷಧೋಪಚಾರಕ್ಕಾಗಿ ಅಲ್ಲ. ಆಧ್ಯಾತ್ಮಿಕ ಪ್ರಶ್ನೆಗಳಿಂದ ಮನಸ್ಸಿನಲ್ಲಿ ಗಲಿಬಿಲಿಯೆದ್ದುದರಿಂದ ಅವರು ನನ್ನ ಹತ್ತಿರ ಬಂದಿದ್ದರು. ಡಾ. ಮೇಥಾರವರು ನಿಸರ್ಗಚಿಕಿತ್ಸಕರು. ಅವರು ನನ್ನ ಗೆಳೆಯರು ನನಗೆ ಅನೇಕ ವೇಳೆ ಅವರು ನೆರವಿತ್ತಿದ್ದಾರೆ. ನನಗೆ ಅವರ ಚಿಕಿತ್ಸೆ ಅಗತ್ಯವಿದ್ದಿಲ್ಲ.

ಡಾ. ಸುಶೀಲಾ ನಯ್ಯರ, ಡಾ. ಜೀವರಾಜ ಮೇಥಾ, ಡಾ. ಬಿ. ಸಿ. ರಾಯ್, ಡಾ. ಗಿಲ್ಡರ್ ಮತ್ತು ದಿವಂಗತ ಶ್ರೀ ಅನ್ಸಾರಿ, ಇವರು ನನ್ನ ವೈಯಕ್ತಿಕ ವೈದ್ಯರಾಗಿದ್ದರು. ಆದರೆ ಅವರಲ್ಲೊಬ್ಬರೂ ಪೂರ್ವಭಾವಿಯಾಗಿ ನನಗೆ ತೋರಿಸದೆ ಏನೊಂದನ್ನೂ ಪ್ರಕಟನೆಗೆ ಕೊಡುತ್ತಿದ್ದಿಲ್ಲ. ಇಂದು ನನ್ನ ಒಬ್ಬನೇ ಅದ ವೈದ್ಯನೆಂದರೆ ರಾಮ. ಪ್ರಾರ್ಥನಾ ಕಾಲದಲ್ಲಿ ಹಾಡಲಾದ ಭಜನೆಯಲ್ಲಿರುವಂತೆ ಅವನೇ ಸರ್ವರೋಗ ನಿವಾರಕನು. ಅದು ದೈಹಿಕ, ಮಾನಸಿಕ, ನೈತಿಕ ಯಾವ ಬಗೆಯ ರೋಗವೇ ಇರಲಿ, ಅವನದನ್ನು ಗುಣಪಡಿಸುವನು. ನಿಸರ್ಗ ಚಿಕಿತ್ಸಕರಾದ ಡಾ. ದೀನಶಾ ಮೇಥಾರವರೊಡನೆ ಪ್ರಣಿಧಾನದಲ್ಲಿರುವಾಗ ಈ ವಾಸ್ತವ ರೂಪದ ಸಾಕ್ಷಾತ್ಕಾರ ನನಗಾಯಿತು. ಅದರಿಂದ ನನ್ನ ಮತದಂತೆ ರಾಮನಾಮಕ್ಕೆ ಪ್ರಥಮ ಸ್ಥಾನವಿದೆ. ರಾಮನನ್ನು ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡವನಿಗೆ ಬೇರಾವ ಸಹಾಯವೂ ಬೇಕಾಗದು. ರಾಮನನ್ನು ಸಾಕ್ಷಾತ್ಕರಿಸಿಕೊಂಡವನಿಗೆ ನೀರು ಮೃತ್ತಿಕೆಗಳ ಚಿಕಿತ್ಸೆಕೂಡ ಅನವಶ್ಯ ಇದನ್ನೇ ನಾನು ಅಸಹಾಯರಾಗಿರುವವರಿಗೆ ಉಪಶಮನವಾಗಿ ಹೇಳಿದ್ದೇನೆ. ಆದುದರಿಂದ ದೇಶೀಯ ಮಾರ್ಗವನ್ನನುಸರಿಸಿದರೆ ಅದು ನನಗೆ ಯುಕ್ತವಾದುದೆನಿಸದು.

ಸೇವೆಗಾಗಿ ಮಾನವ ಕುಲವನ್ನು ಸೇವಿಸಿದ ಅನೇಕ ದೊಡ್ಡ ದೊಡ್ಡ ಹಕೀಮರು, ವೈದ್ಯರು ಮತ್ತು ಡಾಕ್ಟರರಿದ್ದರು. ಬಡವರು ದೊಡ್ಡವರೆನ್ನದೆ, ಹಿಂದು ಮುಸಲ್ಮಾನರೆನ್ನದೆ, ಎಲ್ಲರನ್ನೂ ಒಂದೇ ವಿಧದಿಂದ ಗುಣಪಡಿಸಿದ ಡಾ. ಜೋಶಿ ಮಹಾಶಯರು ದಿಲ್ಲಿಯಲ್ಲಿದ್ದರು. ಅವರು ಬಡವರಿಂದ ಏನನ್ನೂ ತೆಗೆದುಕೊಳ್ಳದೆ ಅವರಿಗೆ ಆಹಾರಾದಿಗಳನ್ನೂ ತಿರುಗಿ ಹೋಗುವ ಖರ್ಚಿಗೆ ದುಡ್ಡನ್ನೂ ಕೊಡುತ್ತಿದ್ದರು. ಆದರೆ ನನಗೆ ಈಗಿರುವ ಜ್ಞಾನ ಉಂಟಾದ ಬಳಿಕ ದೇವರ ಮೇಲಲ್ಲದೆ ಅನ್ಯರ ಮೇಲೆ ನಾನು ಭಾರ ಹಾಕಬಯಸುವುದಿಲ್ಲ.

## ಗ್ರಂಥಸಾಹೇಬದ ಪುನಃ ಸ್ಮರಣ

ನಾನು ನಿನ್ನೆ ಸಂಜೆ ಗ್ರಂಥಸಾಹೇಬದ ಒಂದು ಶ್ಲೋಕವನ್ನು ಹೇಳಲೆತ್ತಿದ್ದೆ. ಅದು ಗುರು ಅರ್ಜುನದೇವನ ಕೃತಿ. ಆದರೆ ಹಿಂದು ಧರ್ಮಗ್ರಂಥಗಳಲ್ಲಿಯ ಅನೇಕ ಭಜನೆಗಳಂತೆ ಸಂತರ ಅನುಯಾಯಿಗಳು ತಾವೇ ಶ್ಲೋಕಗಳನ್ನು ಬರೆದು ಅನೇಕ ವೇಳೆ ಅವನ್ನು ತಮ್ಮ ಗುರುಗಳು ಬರೆದರೆಂದು ಹೇಳುತ್ತಿದ್ದರು. ಆ ಶ್ಲೋಕದಲ್ಲಿ "ಮನುಷ್ಯನು ದೇವರನ್ನು ರಾಮ, ಖುದಾ ಮುಂತಾದ [illegible]ಗಳಿಂದ ಕರೆಯುತ್ತಾನೆ. ಕೆಲವರು ಯಾತ್ರೆ[illegible] ನದಿಗಳಲ್ಲಿ ಮೀಯುತ್ತಾರೆ. ಕೆಲ[illegible] ತೊಡಗುತ್ತಾರೆ. ಕೆಲವರು ದೇವ[illegible] [illegible]ಯುಗಳಲ್ಲಿ ಪೂಜಿಸುತ್ತಾರೆ. ಮುಕ್ತಿ[illegible]; ಕೆಲವರು ಭಯಭಕ್ತಿಯಿಂದ ಸುಮ್ಮನೆ ತಲೆಬಾಗುವರಷ್ಟೆ; ಕೆಲವರು ವೇದ ಓದುತ್ತಾರೆ ಬೇರೆಯವರು ಕುರಾನನ್ನು; ಕೆಲವರು ನೀಲಿಯುಡುಪನ್ನು ಧರಿಸುತ್ತಾರೆ. ಮತ್ತೆ ಕೆಲವರು ಬಿಳಿ ಉಡುಪನ್ನು ಹಾಕಿಕೊಳ್ಳುತ್ತಾರೆ. ಕೆಲವರು ತಮ್ಮನ್ನು ಹಿಂದುಗಳೆಂದೂ ಮಿಕ್ಕವರು ತಮ್ಮನ್ನು ಮುಸಲ್ಮಾನರೆಂದೂ ಕರೆದುಕೊಳ್ಳುತ್ತಾರೆ. ಆದರೆ ನಾನಕನೆನ್ನುತ್ತಾನೆ—ಯಾರು ನಿಜವಾಗಿಯೂ ದೇವರ ನಿಯಮಗಳಂತೆ ನಡೆದುಕೊಳ್ಳುತ್ತಾರೋ ಅವರಿಗೆ ದೇವರ ಗುಟ್ಟು ಗೊತ್ತು"—ಎಂದು ಹೇಳುತ್ತು. ಹಿಂದು ಧರ್ಮದಲ್ಲಿ ಈ ಉಪದೇಶವು ಸಾರ್ವತ್ರಿಕವಾಗಿದೆ ಆದುದರಿಂದ ನಾಲ್ಕುವರೆ ಕೋಟಿ ಮುಸಲ್ಮಾನರನ್ನು ಹಿಂದುಸ್ಥಾನದಿಂದ ಹೊರಗಟ್ಟಬೇಕೆಂಬ ಹುಚ್ಚನ್ನು ಅರ್ಥಮಾಡಿಕೊಳ್ಳುವುದು ನನಗೇಕೋ ಕಠಿನವಾಗಿದೆ.

## ಇದು ಮಹಾಪರಾಧವೇ?

ನನಗೆ ಅನ್ಯ ಸಮಾಜದವರೊಬ್ಬರ ಚೀಟಿ ಬಂದಿದೆ. ಅದರಲ್ಲಿ ಅವರು— ಕಾಂಗ್ರೆಸ್ಸು ಅಗಲೇ ೩ ಮಹಾಪರಾಧಗಳನ್ನು ಮಾಡಿದ್ದಲ್ಲದೆ ಈಗ ಅತ್ಯಂತ ಬೃಹತ್ಪರಿಣಾಮದ ನಾಲ್ಕನೆಯ ಮಹಾಪರಾಧವೊಂದನ್ನು ಮಾಡುತ್ತಿದೆ. ಅದೆಂದರೆ, ಮುಸ್ಲಿಮರನ್ನು ಹಿಂದು ಶಿಖರೊಟ್ಟಿಗೆ ಪುನಃ ಹಿಂದುಸ್ಥಾನದಲ್ಲಿ ನೆಲೆಗೊಳಿಸುವುದು— ಎಂದು ಅಭಿಪ್ರಾಯಪಟ್ಟಿದ್ದಾರೆ. ನಾನು ಕಾಂಗ್ರೆಸ್ಸಿನ ಪರವಾಗಿ ಮಾತನಾಡುತ್ತಿಲ್ಲವಾದರೂ ನಾನೇ ಅಂತಹ ಮಹಾಪರಾಧವೆಂದು ಉಕ್ತಗೃಹಸ್ಥರು ಹೇಳುವುದನ್ನು ಆಚರಿಸಲು ಸಿದ್ಧನಿದ್ದೇನೆ; ಪಾಕಿಸ್ತಾನಕ್ಕೆ ಹುಚ್ಚು ಹಿಡಿದಿದ್ದರೆ ಅದು ಹಾಗೇ ಮಾಡಬೇಕಿತ್ತೇ? ಅದು ನಿಜವಾಗಿಯೂ ಮಹಾಪರಾಧ, ಒಂದು ಅತ್ಯಂತ ಪರಮಾವಧಿ ಪರಿಮಾಣದ ಪಾಪಕೃತ್ಯ. ಹುಚ್ಚು ಬಿಟ್ಟಮೇಲೆ ಇಂಥವರಿಗೆ ತಮ್ಮದು ತಪ್ಪೆಂಬುದೂ ನಾನು ಹೇಳಿದ್ದೇ ಸರಿಯೆಂಬುದೂ ಗೊತ್ತಾಗುತ್ತದೆ.

## ಪೈಶಾಚಿಕ ಅಸಹಿಷ್ಣುತೆ ಮತ್ತು ಅಧಿಕಪ್ರಸಂಗ

ರಾಜಕುಮಾರಿಯಿಂದ ಒಂದುಮಾತು ತಿಳಿದುಬಂತು. ಅದನ್ನು ಕೇಳಿ ನಾನು ವ್ಯಥಿತನಾಗಿದ್ದೇನೆ; ಆವಳೀಗ ಆರೋಗ್ಯ ಖಾತೆಯ ಮಂತ್ರಿಯಾದ್ದಾಳೆ. ಅವಳು ಕ್ರೈಸ್ತಾನುಯಾಯಿಯಾದ್ದರಿಂದ ತಾನು ಹಿಂದುವೂ ಹೌದು ಸಿಕ್ಖಳೂ ಹೌದು ಎಂದು ಅವಳೆನ್ನುತ್ತಿದ್ದಳು. ಹಿಂದು ಮುಸ್ಲಿಮರ ಎಲ್ಲ ಶಿಬಿರಗಳ ಯೋಗಕ್ಷೇಮವನ್ನು ಅವಳು ನೋಡಿಕೊಳ್ಳಲು ಯತ್ನಿಸುತ್ತಿದ್ದಳು. ಮುಸ್ಲಿಂ ಶಿಬಿರಗಳಲ್ಲಿ ಕೆಲಸ ಮಾಡಲು ಒಂದೇ ಬಾರಿಗೆ ಹಿಂದುಗಳನ್ನು ಕಳುಹುವದು ಅಸಾಧ್ಯವಾದ್ದರಿಂದ ಅವಳು ಆ ಕೆಲಸಕ್ಕೆ ಕ್ರೈಸ್ತಪಂಥದ ಹುಡುಗರನ್ನೂ ಹುಡುಗಿಯರನ್ನೂ ನಿಯೋಜಿಸಿದಳು. ಈಗ ಕೆಲವು ಕ್ರುದ್ಧ ಹಾಗೂ ಬುದ್ಧಿ ಹೀನ ಜನರು ಕ್ರೈಸ್ತ ಧರ್ಮೀಯರನ್ನು ಹೆದರಿಸುತ್ತಿದ್ದಾರೆ ಮತ್ತು ಆದರಿಂದ ಅವರಲ್ಲನೇಕರು ಮನೆ ಮಠಬಿಟ್ಟು ಹೋಗಿಬಿಟ್ಟಿದ್ದಾರೆ. ಇದು ಪೈಶಾಚಿಕ ಕೃತ್ಯ. ಕ್ರೈಸ್ತ ಧರ್ಮೀಯರಿಗೆ ಹಿಂದುಗಳೊಡನೆ ರಕ್ಷಣೆ ಕೊಡುವುದಾಗಿ ಆಶ್ವಾಸನವಿತ್ತಿರುವರೆಂದು ರಾಜಕುಮಾರಿಯಿಂದ ಕೇಳಿ ನನಗೆ ಕೆಲಮಟ್ಟಿಗೆ ಸಂತೋಷ ಉಂಟಾಯಿತು. ಅವರು ಪುನಃ ಶಾಂತತೆಯಿಂದ ಮನೆಗೆ ಹೋಗಿ ಯಥಾಪ್ರಕಾರ ರೋಗಿಗಳ ಹಾಗೂ ಇತರ ನರಳುವ ಮಾನವ ಕುಲದ ಸೇವೆಯನ್ನು ನಿರ್ವಿಘ್ನವಾಗಿ ನಡೆಸಲು ಅನುಕೂಲವಾಗಬಹುದೆಂದು ನಾನು ಹಾರೈಸುತ್ತೇನೆ.

## ನನ್ನ ಶ್ರದ್ಧೆ ಶಿಥಿಲವಾಯಿತೆ?

ಪತ್ರಿಕೆಗಳು ಇತ್ತೀಚೆ ನನ್ನ ಮಾತುಗಳನ್ನು ಪ್ರಕಟಿಸಿದ ರೀತಿಯಿಂದ 'ಅಹಿಂಸೆಯಲ್ಲಿ ನನ್ನ ಶ್ರದ್ಧೆ ಸಡಿಲವಾಯಿತೆ?' ಎಂದು ಕಲಕತ್ತದಿಂದ ಒಬ್ಬರು ಕೇಳುತ್ತಾರೆ. ನನ್ನ ಶ್ರದ್ಧೆ ಶಿಥಿಲವಾಗಿಲ್ಲ. ಈಗಿನ ಪರಿಸ್ಥಿತಿಯಲ್ಲಿ ಸಾಮಂತರಾಜ್ಯಗಳು ಸಂಧಾನದಿಂದ ತಮ್ಮಲ್ಲಿಯ ಜಗಳವನ್ನು ಬಗೆಹರಿಸಿಕೊಳ್ಳಲಾಗದಿದ್ದರೆ ಯುದ್ಧವೇ ಗತಿಯೆಂದಿಷ್ಟೇ ನಾನು ಹೇಳಿದ್ದು.

ಬಿರ್ಲಾಭವನ ಹೊಸದಿಲ್ಲಿ
ತಾ. ೨೮-೯-೪೭

## ಚರ್ಚಿಲ್ಲರ ಅವಿವೇಕ

ಈ ದಿನ ಸಾಯಂಕಾಲ ವಾಡಿಕೆಗಿಂತ ಹೆಚ್ಚು ಜನ ಸಮ್ಮಿಲಿತವಾಗಿದ್ದಿತು. ಪವಿತ್ರ ಕುರಾಣದೊಳಗಿನ ವಿಶಿಷ್ಟ ಶ್ಲೋಕಗಳ ಪ್ರಾರ್ಥನೆಗೆ ಯಾರದಾದರೂ ಆಕ್ಷೇಪವಿದೆಯೇ ಎಂದು ಗಾಂಧೀಜಿ ಕೇಳಿದರು. ನಿರೀಕ್ಷಿತವಾಗಿ ಸಭಿಕರಲ್ಲಿ ಇಬ್ಬರು ತಮ್ಮ ಕೈಗಳನ್ನೆತ್ತಿದರು. ಉಳಿದ ಸಭಿಕರಿಗೆ ತೀರ ನಿರಾಶೆಯಾಗುವದೆಂದು ತನಗೆ ಗೊತ್ತಿದ್ದರೂ ಆ ಆಕ್ಷೇಪಕರ ಆಕ್ಷೇಪಣೆಗೆ ತಾವು ಮನ್ನಣೆ ಕೊಡುವುದಾಗಿ ಗಾಂಧೀಜಿ ನುಡಿದರು. ಆದರೂ ಅವರು ಆಕ್ಷೇಪಕರಿಗೆ ಹೀಗೆ ಹೇಳಿದರು. ಅಹಿಂಸೆಯಲ್ಲಿ ಆತ್ಯಂತಿಕ ಶ್ರದ್ಧೆ ನನ್ನಲ್ಲಿ ದೃಢವಾಗಿದ್ದರೂ ನಾನು ತನ್ನಿರುದ್ಧ ಮಾಡಬಾರೆ; ಪ್ರಚಂಡ ಬಹುಮತ ತನ್ನ ವಿರುದ್ಧವಿದ್ದರೂ ಅವರೆಲ್ಲರ ಇಚ್ಛೆಯನ್ನು ತಿರಸ್ಕರಿಸುವದು ಅತ್ಯಂತ ಅನುಚಿತವೆಂದು ಹೇಳದೆ ಗತ್ಯಂತರವಿಲ್ಲ. ಆಕ್ಷೇಪಕರು ತೋರಿಸಿದ್ದು ಅಸಹನೆಯ ಲಕ್ಷಣವಾಗಿದೆ, ವಿನ್‌ಸ್ಟನ್ ಚರ್ಚಿಲ್ಲರ ಕಟುಟೀಕೆಗೆ ಅವಕಾಶಕೊಟ್ಟದ್ದೆ ಈ ಅಸಹನೆ ಎಂಬುದು ಮುಂದಿನ ಮಾತುಗಳಿಂದ ಆಕ್ಷೇಪಕರಿಗೆ ಚೆನ್ನಾಗಿ ಹೊಳೆಯುವದು. ಅನಂತರ ಗಾಂಧೀಜಿಯವರು ಇಂದು ಮುಂಜಾವಿನ ಪತ್ರಿಕೆಗಳಲ್ಲಿ ರಾಯ್ಟರಸಂಸ್ಥೆಯವರಿಂದ ಪ್ರಸಿದ್ಧವಾದ ಸುದ್ದಿಯನ್ನು ಹಿಂದುಸ್ಥಾನಿಯಲ್ಲಿ ಈ ರೀತಿ ಸಂಕ್ಷೇಪತಃ ಅನುವಾದಿಸಿದರು.

"ಈ ದಿನ ರಾತ್ರಿ ಒಂದು ಭಾಷಣದಲ್ಲಿ ಶ್ರೀ ವಿನಸ್ಟನ್ ಚರ್ಚಿಲ್ಲರು 'ಹಿಂದುಸ್ಥಾನದಲ್ಲಿ ನಡೆದ ಭಯಾನಕ ಹತ್ಯಾಕಾಂಡದಿಂದ ನನಗೇನು ಆಶ್ಚರ್ಯವಾಗಿಲ್ಲ' ಎಂದು ಸಾರಿದರು.

'ಸಹಿಷ್ಣು ಸಮತೂಕದ ಮತ್ತು ನಿಷ್ಪಕ್ಷಪಾತ ಬ್ರಿಟಿಶರ ಆಳಿಕೆಯ ಕೃಪಾಛತ್ರದಲ್ಲಿ ಅನೇಕ ತಲೆಮಾರುಗಳ ವರೆಗೆ ಸುಖ ಶಾಂತಿ ಸಮಾಧಾನಗಳಿಂದ ಇದ್ದ ಮತ್ತು ಅತ್ಯುನ್ನತ ಸಂಸ್ಕೃತಿಯನ್ನು ಸೃಷ್ಟಿಸಬಲ್ಲ ಜನಾಂಗವಿಂದು ನರಮಾಂಸಭಕ್ಷಕ ಕ್ರೌರ್ಯ ಉನ್ಮಾದದಿಂದ ಮಾಡುತಿರುವ ಕೊಲೆ ಸುಲಿಗೆ ಹತ್ಯಾಕಾಂಡಗಳ ನಾಟಕದ ಪ್ರಾರಂಭವಿದೀಗಳಗಿದೆ' ಎಂದು ಚರ್ಚಿಲ್ಲರು ಘೋಷಿಸಿದರು.

'ಕಳೆದ ೬೦—೭೦ ವರುಷಗಳಿಂದ ಇಡೀ ಜಗತ್ತಿನಲ್ಲಿ ಅತಿ ಶಾಂತವಾದ ದೇಶದ ಜನಸಂಖ್ಯೆ ಪ್ರಚಂಡ ಪ್ರಮಾಣದಲ್ಲಿ ಕಡಮೆಯಾಗುತಿರುವದನ್ನು ಈ ಪ್ರದೇಶದಲ್ಲಿ ಏಶಿಯಾವು ಹಿಂದೆಂದೂ ಕಾಣದ ಸುಧಾರಣೆಯ ಶೋಚನೀಯ ಚಿತ್ರವನ್ನು ಭವಿಷ್ಯತ್ತು ಬೇಗ ನೋಡಲಿರುವದೆಂಬಲ್ಲಿ ಸ್ವಲ್ಪೂ ಸಂಶಯವಿಲ್ಲ.' ಎಂದೂ ಅವರು ಹೇಳಿದರು.

ಚರ್ಚಿಲ್ಲರು ಸ್ವತಃ ಮಹಾವ್ಯಕ್ತಿಗಳಾಗಿದ್ದರೆಂಬುದು ನಮಗೆಲ್ಲರಿಗೂ ಗೊತ್ತು. ಅವರು ಇಂಗ್ಲಂಡದ ಸಾಮ್ರಾಜ್ಯವಾದೀಪಕ್ಷಕ್ಕೆ ಸೇರಿದವರು. ಇಂಗ್ಲಿಶ ಇತಿಹಾಸದಲ್ಲಿ ಮಾರ್ಲಬರೊ ವಂಶದವರು ಒಳ್ಳೆ ಪ್ರಖ್ಯಾತರು. ಎರಡನೇ ಮಹಾಯುದ್ಧದಲ್ಲಿ ಗ್ರೇಟಬ್ರಿಟನ್ ಗಂಡಾಂತರದ ಪರಿಸ್ಥಿತಿಯಲ್ಲಿರುವಾಗ ಅವರು ಸೂತ್ರಗಳನ್ನು ವಹಿಸಿಕೊಂಡರು. ಆಗ ಸಾಮ್ರಾಜ್ಯವಾಗಿದ್ದ ಇಂಗ್ಲೆಂಡವನ್ನು ಅವರು ಗಂಡಾಂತರದಿಂದ ನಿಸಂದೇಹವಾಗಿ ಸಂರಕ್ಷಿಸಿದರು.

ಅಮೇರಿಕೆ ಮತ್ತು ಉಳಿದ ಮಿತ್ರ ರಾಷ್ಟ್ರಗಳು ಸಹಾಯವಿಲ್ಲದೆ ಗ್ರೇಟಬ್ರಿಟನ್ನು ಯುದ್ಧದಲ್ಲಿ ವಿಜಯಿಯಾಗುತಿರಲಿಲ್ಲ ಎಂದು ವಾದಿಸುವುದು ತಪ್ಪು, ಅವರ ಆ ಉತ್ಸಾಹೀ ಮುತ್ಸದ್ದಿತನದ ಧೋರಣವಲ್ಲದೆ ಬೇರೆ ಯಾವುದು ಈ ರಾಷ್ಟ್ರಗಳನ್ನು ಒಂದೆಡೆ ತಂದಿತು? ಯುದ್ಧದಲ್ಲಿ ವಿಜಯ ಸಿಕ್ಕನಂತರ ಯಾವ ದೊಡ್ಡ ರಾಷ್ಟ್ರವನ್ನು ಅವರು ಇಷ್ಟೊಂದು ಗೌರವಪೂರ್ವಕವಾಗಿ ಪ್ರತಿನಿಧಿಸುವರೊ ಆ ರಾಷ್ಟ್ರವು ಚರ್ಚಿಲ್ಲರ ಸೇವೆಯನ್ನು ಗೌರವಿಸುತಿರುವಾಗಲೆ, ಪ್ರಚಂಡ ವಿತ್ತ ಜೀವಿತಗಳ ಬಲಿಯನ್ನು ಕೊಡಬೇಕಾಗಿದ್ದ ಬ್ರಿಟನ್ನಿನ ಪುನರ್ನಿವೇಶನಕ್ಕಾಗಿ ವಿರುದ್ಧ ಕೂಲಿಕಾರ ಸರಕಾರವನ್ನೇ ಸ್ವಾಗತಿಸಿತು. ಬ್ರಿಟಿಶರು ಪ್ರಸಂಗಕ್ಕೆ ತಕ್ಕಂತೆ ಮುಂಬಂದು ಸ್ವಯಂ ಸಾಮ್ರಾಜ್ಯವನ್ನು ಒಡೆಯಲು ಮತ್ತು ಅದರ ಸ್ಥಳದಲ್ಲಿ ಹಿಂದೆಂದೂ ಇಲ್ಲದ ಮತ್ತು ಹೆಚ್ಚು ವೈಭವಪೂರ್ಣವಾದ ಹೃದಯಸಾಮ್ರಾಜ್ಯವನ್ನು ಪ್ರಸ್ಥಾಪಿಸಿದರು. ಹಿಂದುಸ್ಥಾನವು ಒಡೆದು ಇಬ್ಭಾಗವಾಗಿದ್ದರೂ ಅದು ಸ್ವಯಂ ಕಾಮನ್‌ವೆಲ್ಥ ಸದಸ್ಯ ಆಗಿ ಉಳಿಯುವ ಘೋಷಣೆ ಮಾಡಿದ್ದನ್ನು ಗಾಂಧೀಜಿ ಉಲ್ಲೇಖಿಸಿದರು. ಎಲ್ಲ ಪಕ್ಷಗಳಿಂದ ಕೂಡಿದ ಇಡೀ ಬ್ರಿಟಿಶ ರಾಷ್ಟ್ರವೇ ಈ ಉತ್ತಮ ಧೋರಣವನ್ನು ಮೆಚ್ಚಿತು. ಈ ಮೆಚ್ಚಿಗೆಯಲ್ಲಿ ಶ್ರೀ. ಚರ್ಚಿಲ್ಲರು ಮತ್ತು ಅವರ ಪಕ್ಷವೂ ಸೇರಿದೆ. ಭವಿಷ್ಯತ್ತು ಈ ಮಾರ್ಗವು ನ್ಯಾಯ್ಯವೆಂದು ತಿಳಿಯುವದೋ ಇಲ್ಲವೊ ಎಂಬುದು ಬೇರೆ ಮಾತು. ಈ ಬದಲಾವಣೆಗೆ ಪಾಲುಗಾರರಾಗಿದ್ದ ಶ್ರೀ ಚರ್ಚಿಲ್ಲರು ಅದರ ಗೌರವವನ್ನು ಕಡಮೆ ಮಾಡುವಂಥ ಯಾವ ಮಾತನ್ನೂ ಆಡಬಾರದು, ಕೃತಿಯನ್ನು ಮಾಡಬಾರದು ಎಂದೂ ತಮ್ಮ ಪ್ರತಿಪಾದನೆ. ಆದರೆ ಇದು ಪ್ರಸ್ತುತವಲ್ಲ. ಬ್ರಿಟಿಶರ ಅಧಿಕಾರ ತ್ಯಾಗಕ್ಕೆ ಹೋಲುವಂಥದು ಆಧುನಿಕ ಇತಿಹಾಸದಲ್ಲಿಯೆ ಇರುವದಿಲ್ಲ. ಅಶೋಕನ ತ್ಯಾಗವನ್ನು ಈಗ ಸ್ಮರಣೆಗೆ ತಂದುಕೊಳ್ಳಬಹುದಾಗಿದೆ. ಕುಬೇರನ ಸಂಪತ್ತು ಇದ್ದ ಶ್ರೇಷ್ಠ ಅಶೋಕನಿಗೆ ಇದನ್ನು ಹೋಲಿಸಬಹುದಾಗಿದೆ. ಆದರೆ ಅಶೋಕನು ಅನುಪಮನು ಮತ್ತು ಆಧುನಿಕ ಇತಿಹಾಸಕ್ಕೆ ಸೇರಿದವನಲ್ಲ. ಆದುದರಿಂದ ಚರ್ಚಿಲ್ಲರ ಭಾಷಣದ ರಾಯಟರ ಸಂಸ್ಥೆಯ ಸಾರವನ್ನು ನೋಡಿ ನನಗೆ ಬಹಳ ವಿಷಾದವಾಗುತ್ತದೆ. ಈ ಪ್ರಸಿದ್ಧ ಸುದ್ದಿ ಸಂಸ್ಥೆಯು ತಪ್ಪಾಗಿ ವರದಿ ಮಾಡಿರಲಿಕ್ಕಿಲ್ಲೆಂದು ಭಾವಿಸುತ್ತೇನೆ ಎಂದೂ ಗಾಂಧೀಜಿ ಹೇಳಿದರು. ತಾವು ಯಾವ ರಾಷ್ಟ್ರದ ಶ್ರೇಷ್ಠ ಸೈನಿಕರಾಗಿರುವರೋ ಆ ರಾಷ್ಟ್ರಕ್ಕೆ ಚರ್ಚಿಲ್ಲರು ಅಪಕಾರವನ್ನೆ ಮಾಡಿರುವರು. ಬ್ರಿಟಿಶರ ದಾಸ್ಯದಿಂದ ಮುಕ್ತವಾದ ಬಳಿಕ ಹಿಂದುಸ್ಥಾನದಲ್ಲಿ ಇಷ್ಟೊಂದು ಅನರ್ಥವಾಗುತಿದೆಂಬುದು ಅವರಿಗೆ ಗೊತ್ತಿದ್ದರೆ ಅದರ ದೋಷವನ್ನು ಅವರ ಅಭಿಪ್ರಾಯದಂತೆ 'ಶ್ರೇಷ್ಠ ಸಂಸ್ಕೃತಿಯನ್ನು ಸೃಷ್ಟಿಸಬಲ್ಲ ಜನಾಂಗ'ದ ಮೇಲೆ ಹೊರಿಸುವ ಬದಲು ಅದೆಲ್ಲ ಸಾಮ್ರಾಜ್ಯ ನಿರ್ಮಾತರ ದೋಷವೇ ಎಂಬ ಬಗ್ಗೆ ಅವರು ಸ್ವಲ್ಪ ವಿಚಾರಮಾಡಿ ತಿಳಿದುಕೊಳ್ಳಬೇಕಾಗಿತ್ತು. ಚರ್ಚಿಲ್ಲರು ಸಾರಾಸಾರ ವಿಚಾರ ಮಾಡದೆ ಈ ರೀತಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದು ಬಹಳ ಅವಸರದ್ದಾಯಿತು. ಹಿಂದುಸ್ಥಾನದಲ್ಲಿ ಕೋಟ್ಯವಧಿ ಜನರಿರುವರು. ಅವರಲ್ಲಿ ಕೆಲ ಲಕ್ಷ ಜನರು ಪಾಶವೀ ಕೃತ್ಯಕ್ಕೆಳಸಿದರೆ ಅಷ್ಟೇನು ಮಹತ್ವದ್ದಲ್ಲ. ಚರ್ಚಿಲ್ಲರು ಸ್ವತಃ ಹಿಂದುಸ್ಥಾನಕ್ಕೆ ಬಂದು ಪರಿಸ್ಥಿತಿಯನ್ನು ಪ್ರತ್ಯಕ್ಷವಾಗಿ ಅಭ್ಯಸಿಸಬೇಕೆಂದೂ ಆದರೆ ಪಕ್ಷದಂಗಡಕ್ಕಿಂತ ಮರ್ಯಾದೆಗೆ ಹೆಚ್ಚು ಮಹತ್ವಕೊಡುವ ಮತ್ತು ಬ್ರಿಟಿಶರ ವ್ಯವಹಾರವನ್ನು ಅತ್ಯಂತ ಯಶಸ್ವಿ ಮಾಡುವಲ್ಲಿ ನಿರತರಾದ ಪೂರ್ವಗ್ರಹದೂಷಿತರಾಗದ ನಿಷ್ಪಕ್ಷಪಾತ ಪ್ರಾಮಾಣಿಕ ಆಂಗ್ಲರಂತೆ ಈ ಕೆಲಸವನ್ನು ಮಾಡಬೇಕೆಂದೂ ಬಿನ್ನವಿಸುತ್ತೇನೆ. ಗ್ರೇಟ ಬ್ರಿಟನ್ನದ ಈ ಅಪೂರ್ವ ಕೃತ್ಯವನ್ನು ಪರಿಣಾಮಗಳಿಂದ ನಿರ್ಣಯಿಸಲಾಗುವದು. ಹಿಂದುಸ್ಥಾನ ಸದಸ್ಯರಾಷ್ಟ್ರವಾಗುಳಿದಿರದಿದ್ದರೆ ಎರಡೂ ಭಾಗಗಳಿಗೆ ಪರಸ್ಪರ ಹೊಡೆದಾಡುವದಕ್ಕೆ ತಿಳಿಯದಲೆ ಆಮಂತ್ರಣವನ್ನು ಕೊಟ್ಟಂತಾಗುತಿತ್ತು. ಬಂಧು ಸಾಮಂತ ರಾಷ್ಟ್ರಗಳೆಂದು ಎರಡೂ ಭಾಗಗಳಿಗೆ ಸ್ವಾತಂತ್ರ್ಯವನ್ನು ದಯಪಾಲಿಸಿದ್ದು ಆ ಕಾಣಿಕೆಗೆ ಕಲಂಕವನ್ನು ತಂದಂತಾಗಿದೆ. ಯಾವದೊಂದು ಸಾಮಂತ ರಾಷ್ಟ್ರವು ಬ್ರಿಟಿಶ ಕಾಮನವೆಲ್ಥ ರಾಷ್ಟ್ರಗಳ ಪರಲು ಹರಿದುಕೊಳ್ಳಲು ಸ್ವತಂತ್ರವಿದೆಂದು ಹೇಳುವಲ್ಲಿ ಅರ್ಥವಿಲ್ಲ. ಮಾಡುವದಕ್ಕಿಂತ ಹೇಳುವದು ಬಹಳ ಸುಲಭ. ಈ ಪ್ರತಿಪಾದನೆಯನ್ನು ಮುಂದುವರಿಸಬಯಸುವದಿಲ್ಲ. ಚರ್ಚಿಲ್ಲರು ಇನ್ನಷ್ಟು ಸಾವಧಾನತೆಯಿಂದ ವಿಚಾರ ಮಾಡಬಹುದಾಗಿತ್ತು. ಸ್ವತಃ ಪರಿಸ್ಥಿತಿಯನ್ನು ಪೂರ್ಣವಾಗಿ ತಿಳಿದುಕೊಳ್ಳದೆ ಅವರು ತಮ್ಮ ಪಾಲುಗಾರರನ್ನು ಖಂಡಿಸಿದ್ದಾರೆ. ಸಭಿಕರಿಗೆ ನಾನು ಇಷ್ಟೇ ಹೇಳಬಯಸುತ್ತೇನೆ. ಸಭಿಕರಲ್ಲಿ ಅನೇಕರು ಚರ್ಚಿಲ್ಲರಿಗೆ ಅವಕಾಶವನ್ನು ಕಲ್ಪಿಸಿ ಕೊಟ್ಟದ್ದುಂಟು. ತಪ್ಪನ್ನು ತಿದ್ದಿಕೊಂಡು ಚರ್ಚಿಲ್ಲರ ಭವಿಷ್ಯವನ್ನು ಸುಳ್ಳಾಗಿಸುವದಕ್ಕೆ ಇನ್ನೂ ಸಮಯವೇನು ಮೀರಿಲ್ಲ. ಇದು ಅರಣ್ಯರೋದನವೆಂಬುದು ನನಗೆ ಗೊತ್ತಿದೆ. ಸ್ವಾತಂತ್ರ್ಯದ ಮಾತು ಪ್ರಾರಂಭವಾಗುವ ಮೊದಲಿನಂತೆ ನನ್ನೀ ಮಾತಿಗೆ ಏನಾದರೂ ಬೆಲೆ, ಶಕ್ತಿ ಇದ್ದರೆ ಚರ್ಚಿಲ್ಲರು ಇಷ್ಟೊಂದು ಅತಿರಂಜಿತವಾಗಿ ವರ್ಣಿಸಿದ ಪಾಶವೀಕೃತ್ಯಕ್ಕೆ ಹಿಂದುಸ್ಥಾನದಲ್ಲಿ ಎಂದೂ ಅವಕಾಶವುಂಟಾಗುತಿರಲಿಲ್ಲ. ಇಂಥ ಸಂಗತಿಗಳು ಸಂಭವಿಸುತಿರಲಿಲ್ಲ. ಅಲ್ಲದೆ ನಮ್ಮ ಆರ್ಥಿಕ ಮತ್ತು ಉಳಿದ ಅಡಚಣೆಗಳನ್ನು ನಿವಾರಿಸಿಕೊಳ್ಳುವ ನ್ಯಾಯ್ಯಮಾರ್ಗದಲ್ಲಿಯೆ ನಾವು ಇರುತಿದ್ದೆವು.

---

## ವಾಹಶಿಬಿರದಲ್ಲಿ ಕಸ್ತೂರಬಾ ನಿಧಿಯ ಕಾರ್ಯಕರ್ತರು

(೭ ನೇ ಪುಟದಿಂದ)

ಮೆಟ್ಟು ಮತ್ತು ಬಟ್ಟೆಗಳನ್ನು ಹಂಚುವದಕ್ಕೆ ಅವಶ್ಯಕವಾದ ಶಿಕ್ಷಣ ಮತ್ತು ತಂತ್ರಜ್ಞಾನ ನಿನಗೆ ಇಲ್ಲೆಂದು ಡಾಕ್ಟರರೊಬ್ಬರು ಅವಳಿಗೆ ಯಾವಾಗಲೂ ಪೀಡಿಸುತ್ತಿದ್ದರು. ಆದರೆ ಅದಕ್ಕೆ ಅವಳು ನಕ್ಕು ಅಪರಿಮಿತ ತಾಳ್ಮೆಯಿಂದ ಮತ್ತೆ ತನ್ನ ಕೆಲಸಕ್ಕೆ ಹೋಗುತ್ತಿದ್ದಳು.

ಈ ಎಲ್ಲ ಕೆಲಸಗಳಲ್ಲದೆ ಕಸ್ತೂರ ಬಾ ನಿಧಿಯ ಕಾರ್ಯಕರ್ತರು ನಿರ್ವಾಸಿತರಿಗೆ ಸರಳತನ, ಉದ್ಯೋಗಪ್ರಿಯತೆ ಮತ್ತು ಸಾಂಘಿಕ ಜೀವನದ ಪಾಠ ಹಾಕಿಕೊಟ್ಟರು. ಅತ್ಯುತ್ತಮ ಮಾದರಿಯ ನಿಸ್ವಾರ್ಥ ಸೇವೆಯದು. ಶ್ರೀಮತಿ ವಿದ್ಯಾವತಿಜಿಯವರಂಥ ಹಲವು ಸಂಘಟಕರನ್ನು ಕಸ್ತೂರಬಾ ನಿಧಿ ನಿಶ್ವಸ್ತ ಮಂಡಳವು ದೊರಕಿಸಿದ್ದಾದರೆ ಅದರ ಕಾರ್ಯದಿಂದ ಕಸ್ತೂರಬಾ ಇವರ ಆತ್ಮಕ್ಕೆ ಸಮಾಧಾನವಾಗುವದರಲ್ಲಿ ಸಂದೇಹವಿಲ್ಲ.

ಹೊಸದಿಲ್ಲಿ —ಸುಶೀಲಾ ನಯ್ಯರ
೨೦—೯—೪೭

# ವಿಭೂತಿ ಪುರುಷ ಗಾಂಧೀಜಿ

(೬ನೆ ಪುಟದಿಂದ)

ಹೇಳಬಹುದು ಎಂದು ಆಶಕಲ್ಪನೆಗಳಿದ್ದವು. ಆದರೆ ಸ್ಥಿತಪ್ರಜ್ಞರಾದ ವಿಭೂತಿ ಪುರುಷರಿಗೆ ಸುಖ ದುಃಖ ಬಂದರೆ ವ್ಯಥೆಯಿಲ್ಲ ಎಂಬುದು ಅಂದು ನಮಗೆ ತಿಳಿಯದಾಯಿತು. ಅದಕ್ಕಾಗಿಯೇ ನಮ್ಮ ಆಗಿನ ಕಲ್ಪನೆಗಳು ನಮ್ಮ ಅಂತಸ್ಥಿತದಾದವು. ಗಾಂಧೀಜಿಯು ತನ್ನ ನಿಜಸ್ವರೂಪದಲ್ಲಿಯೇ ಉಳಿದನು.

## ಮನೋನಿರ್ಧಾರ

ಸ್ವಾತಂತ್ರ್ಯವು ಬರುವ ದಿನಕ್ಕೆ ಗಾಂಧೀಜಿಯು ಪುನಃ ನೌಖಾಲಿಗೆ ಹೋಗಬೇಕೆಂದು ನಿಶ್ಚಯಿಸಿರಬಹುದೆಂದು ತೋರುತ್ತದೆ. ಯಾವಸಹೋದರರು ಹಟದಿಂದ ವಿಭಾಗವನ್ನು ಕಿತ್ತುಕೊಂಡು ವ್ಯಾಜ್ಯ, ಬಡಿದಾಟದ ರಕ್ತದಕಾಲುವೆಯಲ್ಲಿ, ವಿಚಾರ ಮಾಡಿನೋಡಿದರೆ ತಿರುಗಿ ಪಾರತಂತ್ರ್ಯದಬೇರನ್ನು ಭದ್ರವಾಗಿ ಹಿಡಿದುಕೊಂಡು, ಹಲ್ಲುಕಡಿಯುತ್ತ ಕುಳಿತಿರುವರೋ ಅವರ ಹತ್ತಿರದಲ್ಲಿ ಇದ್ದು ಸಹವಾಸಿಯಾಗಿ ವಿವೇಕವನ್ನು ಹುಟ್ಟಿಸುವ ದೃಷ್ಟಿಯಿಂದ ಹೊರಟಿರಬಹುದು. ಆದರೆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಹೋಗಲು ಅವಕಾಶವಾಗದಿದ್ದರೂ ಕಲಕತ್ತದಲ್ಲಿಯೇ ಬಿಡಾರ ಮಾಡಿ ಉದ್ದೇಶ ಸಾಧನೆಗೆ ಕಾಲವನ್ನು ಕಾಯುತ್ತಿದ್ದು ಮೊನ್ನೆ ಅಲ್ಲಿಯ ಗಲಭೆ ನಿಲಿಸಲು ಉಪವಾಸ ವ್ರತವನ್ನು ಕೈಕೊಂಡು ಒಮ್ಮೆ ಉಲ್ಬಣವಾದ ಬಡಿದಾಟವನ್ನು ಕಡಿಮೆ ಮಾಡಿದನು. 'ಸಾಧನೆಯಲ್ಲಿಯೇ ನನ್ನ ಶರೀರವು ಪಾತವಾದರೂ ಚಿಂತೆಯಿಲ್ಲ' ಎಂದು ಅವನು ಹೇಳುತ್ತಿದ್ದಾನೆ.

ಹಿಂದೊಮ್ಮೆ ಗಾಂಧೀಜಿಯು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಹೊರತು ಸಬರ್ಮತಿಯ ಆಶ್ರಮಕ್ಕೆ ಕಾಲು ಇಡುವದಿಲ್ಲವೆಂದು ಪ್ರತಿಜ್ಞೆ ಮಾಡಿ ಹೊರಟು ಬಂದನು. ಇಂದಿಗೂ ಅದರ ಹತ್ತಿರದಲ್ಲಿಯೂ ಸುಳಿಯಲಿಲ್ಲ. ಇದೆಂತಹ ಸತ್ಯ ಪ್ರತಿಜ್ಞೆ! ಇಂದು ಭಾರತಕ್ಕೆ ಸ್ವಾತಂತ್ರ್ಯ ಬಂದಿದೆಯೆಂದು ಜಗತ್ತೇ ಸಾರುತ್ತಿದ್ದರೂ ಗಾಂಧೀಜಿಯು ಆ ಕಡೆಗೆ ತಿರುಗಿ ಸಹ ನೋಡುವದಿಲ್ಲ. ಈಗ ಬಂದ ಇಬ್ಭಾಗದ ಸ್ವಾತಂತ್ರ್ಯವು ಗಾಂಧೀಜೀಯ ತಪಃಸಿದ್ಧಿಗೆ ಬರಬೇಕಾದ ಸ್ವಾತಂತ್ರ್ಯವಲ್ಲ. ಅದು ಬಂದರೆ, ಬಂದಾಗ ಸಾಬರಮತಿಯ ಕಡೆಗೆ ಗಾಂಧೀಜೀಯು ಹೋಗಬಹುದು.

ಗಾಂಧೀಜಿಯು ಭಾರತಕ್ಕೆ ಸ್ವಾತಂತ್ರ್ಯಬಂದ ಹೊರತು ತಾನು ಸಾಯುವದಿಲ್ಲವೆಂದು ಅನೇಕ ಸಲ ಹೇಳಿದ್ದನು. ಸಾಮಾನ್ಯ ಜನತೆಯ ದೃಷ್ಟಿಯಿಂದ ಇಂದು ಅದು ಬಂದಿದೆ. ಗಾಂಧೀಜೀಯ ಮಾತು ಸತ್ಯವಾದುದು ಅಂತರಾತ್ಮನು ನುಡಿಸಿದ ಮಾತು ಸುಳ್ಳಾಗುವುದು. ಎಂತು?

## ಭಾರತ ಒಂದಾದೀತು

ಅಹರಂತೆಯೇ ಇಂದು ಇಬ್ಭಾಗವಾದ ಭಾರತವು ಒಂದಾಗಬೇಕು, ಆಗುತ್ತದೆ. ಭ್ರಾತೃಕಲಹವು ಇಲ್ಲದಂತಾಗಬೇಕು, ಆಗುತ್ತದೆ. ಅದನ್ನು ನೋಡುತ್ತೇನೆ. ಇಲ್ಲದಿದ್ದರೆ ಅದರ ಪ್ರಯತ್ನದಲ್ಲಿಯೇ ಮಡಿಯುತ್ತೇನೆ ಎಂದು ಹೇಳಿ ಪ್ರಯೋಗವೇಶವನ್ನು ಮಾಡಿ ಅನೇಕ ಸಲ ಸಫಲನಾಗಿದ್ದಾನೆ. ಅದರ ಫಲವು ಈಗದೇ ಇರಲು ಶಕ್ಯವಿಲ್ಲ. ಅದಕ್ಕೆ ಹಿಂದೂ ಮಹಮ್ಮದೀಯರು ಸಹಾನುಭೂತಿಯಿಂದ ಗಾಂಧಿಜೀಯ ತಪಃಪ್ರಭಾವವನ್ನು, ಅಂತಃಕರಣದ ವೈಶಾಲ್ಯ ವಿಶುದ್ಧತೆಗಳನ್ನು ಸರಿಯಾಗಿ ತಿಳಿದು ಅರ್ಥಮಾಡಿಕೊಳ್ಳಬೇಕು. ಗಾಂಧಿಜೀಯು ತನಗೆ ನೂರಿಪ್ಪತ್ತು ವರ್ಷ ಬದುಕುವ ಇಚ್ಛೆಯಿದೆ ಬದುಕುತ್ತೇನೆ ಎಂದು ಎಷ್ಟೋ ಸಲ ಹೇಳಿದ್ದಾನೆ. ಹಿಂದೆ ಅದೆಷ್ಟೋ ಸಲ ಉಪವಾಸವ್ರತವನ್ನು ಆಚರಿಸಲಿ, ಬೇರೆ ವಿಷಮ ಪರಿಸ್ಥಿತಿಗಳು ಬಂದಿರಲಿ, ಅವೆಲ್ಲವನ್ನೂ ದಾಟಿ ಬದುಕಿದ್ದಾನೆ. ಈಗಲೂ ಅದರಂತೆಯೇ ಕಲಹವನ್ನು ನಿಲ್ಲಿಸಲು ಹಿಡಿದ ಉಪವಾಸವು ಕೊನೆಗೊಂಡಿತು. ಮುಂದಿನ ಶೇಷ ಆಯುಷ್ಯದಲ್ಲಿ ಅವನ ತಪಸ್ಸಿನ ಪರಮ ಫಲವಾದ ಅಖಂಡ ಭಾರತವನ್ನು ಕಂಡೇಕಾಣುವನೆಂದು ತೋರುತ್ತದೆ. ಅದನ್ನು ಭಾರತೀಯರಿಗೆ, ಪ್ರಪಂಚದ ಜನರಿಗೆ ಒಂದಿಲ್ಲೊಂದು ದಿನ ತೋರಿಸಬಹುದು, ತಿರುಗಿ ಸಾಬರ್ಮತಿಯ ಆಶ್ರಮಕ್ಕೆ ದರ್ಶನ ನೀಡಬಹುದು.

ಜಗತ್ತಿನ ಇಪ್ಪತ್ತನೆಯ ಶತಮಾನದ ಶಾಂತಿದೂತನಾದ ಗಾಂಧೀಜಿ ನಿಶ್ಚಯವಾಗಿಯೂ ವಿಭೂತಿ ಪುರುಷನೇ ಆಗಿರುವನು. ಪರಮಾತ್ಮನ ದೂತನಾದ ಇವನ ಕಾರ್ಯಗಳ ಪರಮೋದ್ದೇಶವು ಸಾಧಿಸದೆ ಉಳಿಯಲು ಶಕ್ಯವೆಂದು ತೋರುವದಿಲ್ಲ. ವಿಭೂತಿಪುರುಷರ ಆಚಾರವಿಚಾರ, ನಡೆನುಡಿ, ಕಾರ್ಯ- ಅವರ ಸಿದ್ಧಿಗಳೆಲ್ಲವೂ ಅಂಥವೇ ಇರುತ್ತವೆ, ಸಫಲವಾಗತಕ್ಕವಿರುತ್ತವೆ.

# ಕರ್ನಾಟಕ

## ಧಾರವಾಡ

ಹುಬ್ಬಳ್ಳಿಯಿಂದ ಪುಣೆಗೆ ಹೋಗುವ ಗಾಡಿಯ ಮಣಿಯ ಮೇಲೆ ನಿಂತು ಪ್ರವಾಸ ಮಾಡುತ್ತಿದ್ದ ೫ ವಿದ್ಯಾರ್ಥಿಗಳನ್ನು ರೇಲ್ವೆ ಪೋಲೀಸರು ಸೆರೆ ಹಿಡಿದು ಅವರ ಮೇಲೆ ಖಟ್ಲೆ ಹಾಕಿದ್ದಾರೆ.

ಹಾಲಿನಲ್ಲಿ ನೀರು ಬೆರಿಸಿದ್ದಕ್ಕೆ ಧಾರವಾಡದಲ್ಲಿ ಪೀರಾಜಿ ದಂಡೇವಾಲೆ, ರಹಿಮಾನ ದಂಡೇವಾಲೆ ನರಸಪ್ಪಾ ಗವಳಿ, ತೇಜಪ್ಪಾ ಗವಳಿ ಇವರಿಗೆ ತಲಾ ೫೦ ರೂ. ದಂಡವಾಗಿದೆ.

ಮೈಸೂರು ಸರಕಾರದವರು ಸಂಪು ಹೂಡಿದ ಮೈಸೂರ ರೇಲ್ವೆ ನೋಕರರಿಗೆ ಸೀದಾ ಕೊಡುವದನ್ನು ನಿಲ್ಲಿಸಿದ್ದರಿಂದ ಮೈಸೂರು ಸಂಸ್ಥಾನಕ್ಕೆ ಹೋಗುವ ಆಹಾರ ಧಾನ್ಯಗಳ ವಾಗಿನುಗಳನ್ನಿಳಿಸುವ ಮತ್ತು ಏರಿಸುವ ಕೆಲಸವನ್ನು ಮಾಡಬಾರದೆಂದು ಹುಬ್ಬಳ್ಳಿಯ ಎಂ ಎಸ್ ಎಂ ರೇಲ್ವೆ ಕೆಲಸಗಾರರು ಮೈಸೂರ ಗಡಿಯಲ್ಲಿರುವ ತಮ್ಮ ಕೆಲಸಗಾರ ಬಂಧುಗಳಿಗೆ ಬಿನ್ನವಿಸಿಕೊಂಡಿದ್ದಾರೆ.

ಗದಗಿನ ರೇಲ್ವೆ ನಿಲ್ದಾಣಕ್ಕೆ ವಿಶಾಲವಾದ ಚಪ್ಪರ, ಉತ್ತಮ ನೆಲಗಟ್ಟಣೆ ಆಗಬೇಕು. ನೀರಿನ ಸಾಕಷ್ಟು ತೊಟ್ಟಿಗಳನ್ನೂ ಹಚ್ಚಬೇಕು ಮೂರನೇ ವರ್ಗದ ತಂಗುವ ಸ್ಥಳವನ್ನು ವಿಸ್ತರಿಸಬೇಕು ಎಂದು ಮುಂತಾಗಿ ಮಾಡಿದ ಸೂಚನೆಗಳನ್ನು ಆದಷ್ಟು ಬೇಗ ಜಾರಿಯಲ್ಲಿ ತರಲಾಗುವದು ಎಂದು ಜನರಲ್ ಮ್ಯಾನೇಜರರು ತಿಳಿಸುತ್ತಾರೆ.

ಕರ್ನಾಟಕ ವಿದ್ಯಾವರ್ಧಕ ಸಂಘದವರು ಏರ್ಪಡಿಸಿದ ಹಿಂದುಸ್ತಾನದ ಪುನರ್ರಚನೆಯ ಉಪನ್ಯಾಸ ಮಾಲೆಯಲ್ಲಿ ಮಾತಾಡುತ್ತ ಅರಣ್ಯ ಖಾತೆಯ ವಿ. ಆರ್. ಕಮಲಾಪುರರು ಕರ್ನಾಟಕದಲ್ಲಿ ಅರಣ್ಯ ಸಂಪತ್ತು ವಿಪುಲವಾಗಿದ್ದು ವಿಜ್ಞಾನಿಗಳು ಅದರ ಶೋಧನಮಾಡಬೇಕೆಂದೂ ಖನಿಜ ಪದಾರ್ಥಗಳೂ ಇಲ್ಲಿ ಸಾಕಷ್ಟು ಸಿಕ್ಕುತ್ತಿದ್ದು ಅದರ ಸಂಶೋಧನೆಯನ್ನು ಸಾಗಿಸಬೇಕೆಂದೂ ಹೇಳಿದರು. ವಿಜ್ಞಾನ ಮತ್ತು ಧನದ ಸಹಾಯದಿಂದ ಈ ಸಂಪತ್ತಿನ ಸದುಪಯೋಗ ಮಾಡಿಕೊಳ್ಳಬೇಕೆಂದು ವ್ಯಾಖ್ಯಾತರು ಬಿನ್ನವಿಸಿಕೊಂಡರು.

ಧಾರವಾಡದ ಮನೋಹರ ಗ್ರಂಥಮಾಲೆಯ ಶ್ರೀ ಜಿ. ಬಿ. ಜೋಶಿಯವರು ಕಲೋಪಾಸಕ ಮಂಡಳವನ್ನು ಸ್ಥಾಪಿಸಿಕೊಂಡು ಕರ್ನಾಟಕ ವಿದ್ಯಾವರ್ಧಕ ಸಂಘದ ಸಹಾಯಕ್ಕಾಗಿ ಕಳೆದ ೨೭-೨೮ ಎರಡು ದಿನ, ಭಾಗ್ಯಶ್ರೀ ಉದ್ಧಾರ, ಮನೆಗೆಲಸ ಮತ್ತು ಪರಿವರ್ತನವೆಂಬ ನಾಲ್ಕು ಪ್ರಯೋಗಗಳನ್ನು ಮಾಡಿದರು. ಕೊನೆಯ ದಿನ ಶ್ರೀ ಬೇಂದ್ರೆಯವರು ವಿದ್ಯಾವರ್ಧಕ ಸಂಘಕ್ಕೆ ಮಂಡಳ ಪರವಾಗಿ ಹಣ ಸಲ್ಲಿಸಿದರು. ಶ್ರೀ ಬೆಟಗೇರಿಯವರು ಅದನ್ನು ಸ್ವೀಕರಿಸಿದರು. ನಾಯಕರು ಅಧ್ಯಕ್ಷರೆಂದು ಭಾಷಣ ಮಾಡಿದರು.

## ಉತ್ತರ ಕನ್ನಡ

ಪ್ರತಿಬಂಧಕ ಆಜ್ಞೆಯನ್ನು ಮುರಿದು ಉತ್ತರ ಕನ್ನಡ ಜಿಲ್ಹೆಯಲ್ಲಿ ಪ್ರವೇಶ ಮಾಡಿದ್ದಕ್ಕಾಗಿ ಕಿಸಾನ ಕಾರ್ಯಕರ್ತರಾದ ಧರ್ಮವೀರ ಸಿಂಗರಿಗೆ ಒಂದು ವರುಷ ಕಠಿಣ ಕೈದು ೨೦೦ ರೂಪಾಯಿ ದಂಡ ಇಲ್ಲವೆ ೪ ತಿಂಗಳ ಕೈದು ಹೀಗೆ ಶಿಕ್ಷೆ ವಿಧಿಸಲಾಯಿತು.

ಕಾರವಾರದಲ್ಲಿ ಪ್ರಮುಖ ನಾಗರಿಕರು ಸಭೆ ಸೇರಿ ತಮಗೂ ಕುಲಾಬಾದಿಂದ ಕೊಚಿಯ ವರೆಗೆ ಪ್ರತ್ಯೇಕವಾದ ಕೊಂಕಣ ಅಥವಾ ಪಶ್ಚಿಮ ಕರಾವಳಿ ಪ್ರಾಂತವನ್ನು ನಿರ್ಮಿಸಿ ಕೊಡಬೇಕೆಂಬ ಗೊತ್ತುವಳಿ ಸ್ವೀಕೃತವಾಗಿ ಶ್ರೀ ಖೇರ, ಎಂ ಪಿ ಪಾಟೀಲ, ಡಾ. ರಾಜೇಂದ್ರ ಪ್ರಸಾದ ಮೊದಲಾದವರಿಗೆ ಕಳಿಸಲಾಯಿತು. ಕರ್ನಾಟಕ ಪ್ರಾಂತಗಳಲ್ಲಿ ಕೊಂಕಣಿಗಳಾದ ತಾವು ಅಲ್ಪಸಂಖ್ಯಾಕರಾಗುವದರಿಂದ ತಮ್ಮ ಭವಿತವ್ಯದ ಬಗ್ಗೆ ಹೆದರಿಕೆಯುಂಟಾಗಿದೆಂದೂ ಅದರಲ್ಲಿ ಹೇಳಲಾಗಿದೆ.

ಕಾರವಾರದಲ್ಲಿ ನ್ಯಾಯಾಧೀಶರಾಗಿದ್ದ ಶ್ರೀ ಎಚ್. ಪಿ. ಸೂರ್ಯವಂಶಿಯವರು ಕೋರ್ಟಿಗೆ ಬರುವಾಗ ಕೂಡ ಮದ್ಯ ಕುಡಿದು ಬರುತ್ತಿದ್ದಾರೆಂದೂ ಒಮ್ಮೆ ಕೊಟ್ಟ ತೀರ್ಪನ್ನು ಮತ್ತೆ ಮತ್ತೆ ಬದಲಿಸುತ್ತಿದ್ದಾರೆಂದೂ ಕಾರವಾರ ಬಾರ ಅಸೋಸಿಯೇಶನ್ನಿನವರು ಗೊತ್ತುವಳಿ ಮೂಲಕ ದೂರಿಕೊಂಡದ್ದರಿಂದ ಶ್ರೀ ಸೂರ್ಯವಂಶಿಯವರನ್ನು ತಾತ್ಪೂರ್ತಿಕವಾಗಿ ಕೆಲಸದಿಂದ ತೆಗೆದು ಈ ಆರೋಪಗಳ ವಿಚಾರಣೆಗಾಗಿ ಬೆಳಗಾವಿಯ ಜಿಲ್ಲಾ ನ್ಯಾಯಾಧೀಶ ಜೋಸ್ನಾವರರನ್ನು ನೇಮಿಸಲಾಗಿದೆ.

ಹೊಸ ಸುಗ್ಗಿ ವರೆಗೆ ಕಾಲಕಳೆಯಬೇಕಾದರೆ ಜಿಲ್ಹೆಗೆ ೧೫೦೦ ಟನ ಜೋಳ ಹಾಗು ೧೦೦ ಟನ ಗೋದಿ ಬೇಕಾಗುವದೆಂದೂ ಸರಕಾರಕ್ಕೆ ತಿಳಿಸಲಾಗಿದೆ. ಈಗ ಸಂಗ್ರಹದಲ್ಲಿ ೨೬೫೦ ಟನ್ ಅಕ್ಕಿ ೪೦೦ ಟನ್ ಮಿಲೊ ಹಾಗು ೩೦ ಟನ್ ಗೋದಿ ಇದ್ದು ಸದ್ಯದ ಬಳಿಕೆ ಪ್ರಮಾಣ ಹೆಚ್ಚಾಗದಿದ್ದಲ್ಲಿ ನವಂಬರ ಮಧ್ಯದ ವರೆಗೆ ಈ ಸಂಗ್ರಹ ಸಾಕಾಗುವದೆಂದೂ ಕಲೆಕ್ಟರರು ಹೇಳಿದರು.

## ಬೆಳಗಾವಿ

ಕೆಲವು ಕಾಡತೂಸುಗಳನ್ನು ಬ್ರೆನ್‌ಗನ್ನಿನ ಭಾಗಗಳನ್ನೂ ಅನಧಿಕೃತವಾಗಿ ಇಟ್ಟುಕೊಂಡಿದ್ದನೆಂದು ಶ್ರೀ ಗುರುದೇವಸಿಂಗ ಎಂಬ ಸೈನಿಕನ ಕೋರ್ಟ ಮಾರ್ಶಲ್ ವಿಚಾರಣೆ ನಡೆದು ಲೆ. ಸಾಲಕನೆಂಬವನು ಅದನ್ನು ತನ್ನ ಹತ್ತರ ಇಟ್ಟಿದ್ದನೆಂದು ಹೇಳಿದ್ದನ್ನು ನಂಬಿ ಅವನನ್ನು ದೋಷಮುಕ್ತ ಮಾಡಲಾಯಿತು.

ಗೋಕಾಕ ತಾಲೂಕಿನಿಂದ ಕಳ್ಳತನದಿಂದ ಸಂಸ್ಥಾನ ಪ್ರದೇಶಕ್ಕೆ ಧಾನ್ಯಸಾಗಿಸುತ್ತಿದ್ದ ೩೦ ಜನರನ್ನು ಸೀದಾ ಇನಸ್ಪೆಕ್ಟರ ಮುಲ್ಲಾ ಇವರು ಕೊಳವಿ ಗ್ರಾಮದ ಹತ್ತರ ಬಂಧಿಸಿದ್ದಾರೆ. ಈ ಜನರು ತಮ್ಮ ಕೂಲೀ ಕಾಳು ಎಂದು ಹೇಳಿ ತಲೆಯ ಮೇಲೆ ಧಾನ್ಯ ಸಾಗಸುತ್ತಿದ್ದರಂತೆ. ಈಗ ಇವರು ೧೨ ಚೀಲ ಧಾನ್ಯದೊಂದಿಗೆ ಸಿಕ್ಕುಬಿದ್ದಿದ್ದಾರೆ.



## ಕನ್ನಡ ಸಂಸ್ಥಾನಗಳು

ಕೊಲ್ಹಾಪುರ ಸಂಸ್ಥಾನ ಕೋಟೆ ನ್ಯಾಯವರ ಸಂಘದ ಒಂದು ಸಭೆಯು ಪೂರ್ಣ ಪಂಚಾಯತಿ ನಿರಂತರ ಸ್ವಾತಂತ್ರ್ಯದಲ್ಲಿ ... ಗಳು ಮುಂದೆ ಬಂದಿದೆ. ಗೃಹಮಂತ್ರಿಗಳಿಂದ ಉತ್ತರ ಬಂದ ಬಳಿಕ ಈ ಸಭೆ ಪಂಚಾಯತಿ ಹೊರಡುವದು.

ಕರಾಡದಲ್ಲಿ ದಿ ಬ್ಯಾಂಕ ಆಫ್ ಕರ್ನಾಟಕ ಇದರ ಶಾಖೆಯು ಪ್ರಾರಂಭೋತ್ಸವ ೨೯ ನೇ ತಾರೀಕು ಸಾಯಂಕಾಲ ಸಾಂಗಲಿ ಸಂಸ್ಥಾನದ ಅಭಿವೃದ್ಧಿ ಮಂತ್ರಿ ಮಾನ್ಯ ಪಾಟೀಲರ ಹಸ್ತದಿಂದ ಜರುಗಿತು. ಅನೇಕ ಪ್ರಮುಖ ವ್ಯಾಪಾರಿಗಳು, ನಾಗರಿಕರು ಸಮಾರಂಭಕ್ಕೆ ಬಂದಿದ್ದರು. ಈ ಬ್ಯಾಂಕಿನವರು ಹಳ್ಳಿಗರಿಗೆ ಬ್ಯಾಂಕಿನ ಸಾಲಗಳನ್ನು ನೀಡಲು ಮುಂದೆ ಬಂದದ್ದನ್ನು ಮಂತ್ರಿವರ್ಯರು ಮೆಚ್ಚಿದರು.

ಕೊಲ್ಹಾಪುರ ಪ್ರಜಾಪರಿಷತ್ತಿನ ಶ್ರೀ ಮಾಧವರಾವ ಬಾಗಲ, ರತ್ನಪ್ಪಾ ಕುಂಬಾರ ಹಾಗು ನಾರಾಯಣರಾವ ಸಾ ನಾಯಕರು ಆಮಂತ್ರಣದ ಮೇರೆಗೆ ಮಹಾರಾಜರನ್ನು ಕಂಡು ಘಟನೆ ತಿದ್ದುಪಡಿ ಬಗ್ಗೆ ಚರ್ಚಿಸಿದರು. ಉಳಿದ ಸಂಘಗಳ ಪ್ರಮುಖರ ಅಭಿಪ್ರಾಯ ಕೇಳಿಕೊಂಡು ತೀರ್ಪಯವನ್ನು ತಿಳಿಸುವದಾಗಿ ಮಹಾರಾಜರು ಹೇಳಿದರು. ಒಂದು ವಾರ ನಂತರ ಮತ್ತೆ ಮಾತುಕತೆ ಮುಂದರಿಯುವವು.

ಮೈಸೂರು ಸರಕಾರದವರು ಶಿವಮೊಗ್ಗೆಯಲ್ಲಿ ೫೦ ಲಕ್ಷ ರೂಪಾಯಿ ಬಂಡವಲು ಉಳ್ಳ ಸಕ್ಕರೆ ಕಂಪನಿಯನ್ನು ಸ್ಥಾಪಿಸುವವರಿದ್ದಾರೆ. ಇದರಲ್ಲಿ ಪ್ರತಿ ವರ್ಷ ೧೦ ರಿಂದ ಹನ್ನೆರಡು ಸಾವಿರ ಟನ್ ಸಕ್ಕರೆ ಹೊರಡುತ್ತದೆ.

ಮೈಸೂರ ರೇಲ್ವೆ ಸಂಪಿನ ಮೂಲಕ ಪೆಟ್ರೋಲಿನ ಕೊರತೆ ಬಹಳಾಗಿರುವದರಿಂದ ಬಸ್ಸುಗಳ ಓಡಾಟ ಬೇಗನೆ ನಿಲ್ಲುವ ಲಕ್ಷಣವಿದೆಂದು ತಿಳಿಯುತ್ತದೆ.

ದಕ್ಷಿಣ ಸಂಸ್ಥಾನ ಒಕ್ಕೂಟ ಯೋಜನೆಯು ದಕ್ಷಿಣ ಸಂಸ್ಥಾನ ಪ್ರಾದೇಶಿಕ ಸಮಿತಿಯ ಸಭೆಯಲ್ಲಿ ಚರ್ಚಿತವಾಗಿ ಸಂಸ್ಥಾನಗಳನ್ನು ಪ್ರಾಂತಿಕ ಹಿಂದುಸ್ತಾನದಲ್ಲಿ ಸಮಾವೇಶ ಮಾಡಬೇಕೆಂದೂ ಆದರೆ ... ದೃಷ್ಟಿಯಿಂದ ಅದು ದಕ್ಷಿಣ ... [illegible]

[illegible]

## ಸಂಸ್ಥಾನಗಳ ವರಿಷ್ಠಾಧಿಕಾರ ಪ್ರಜೆಗಳ ಸೊತ್ತು

### ಜಮಖಂಡಿ ರಾಜೇಸಾಹೇಬರ ಮನನೀಯ ಭಾಷಣ

ಪ್ರಿಟಿಷರು ೧೫ ಕಣ್ಮಸಕಾಮಾಡಿ ಕೈಯಲ್ಲಿದ್ದ ವರಿಷ್ಠ ಅಧಿಕಾರವನ್ನು ಹಿಂದೀ ಒಕ್ಕೂಟಕ್ಕೆ ಕೊಡದೆ ಸಂಸ್ಥಾನಗಳಿಗೆ ಕೊಟ್ಟರು. ಸಂಸ್ಥಾನಗಳು ಈ ವರಿಷ್ಠಾಧಿಕಾರ ಕಾಲ್ಪನಿಕವೂ ನಿರರ್ಥಕವೂ ಆಗದೆ ಈ ಇದು ನಿಜವಾಗಿಯೂ ಪ್ರಜೆಗಳಿಗೆ ಸೇರತಕ್ಕದ್ದು ಎಂಬ ಮಹತ್ವದ ಘೋಷಣೆಯನ್ನು ಜಮಖಂಡಿಯ ಹೊಸ ರಾಜೇಸಾಹೇಬರು ಶಾಸನ ಸಭೆಯ ಪ್ರಾರಂಭೋತ್ಸವವನ್ನು ಜರುಗಿಸುತ್ತ ಅಪ್ಪಣೆ ಕೊಡಿಸಿದರು. ಮುಂದುವರಿಯುತ್ತ ನನ್ನ ಸಂಸ್ಥಾನವು ಹಿಂದೀ ಒಕ್ಕೂಟದ ಒಂದು ಭಾಗವಾಗಿದೆ. ನಾನು ಹಿಂದೀ ಒಕ್ಕೂಟದ ವರಿಷ್ಠಾಧಿಕಾರವನ್ನು ಒಪ್ಪಿಕೊಂಡಿದ್ದೇನೆ ಎಂದು ಹೇಳಿದರು. ತಂದೆಯವರು ಕೊಟ್ಟ ಸುಧಾರಣೆಗಳಲ್ಲಿ ತಿದ್ದುಪಡಿಮಾಡಿ ಹೆಚ್ಚಿನ ಸುಧಾರಣೆಗಳನ್ನು ಕೊಡಲು ನಾನು ಸಿದ್ಧನಿದ್ದೇನೆ. ಲೋಕಪ್ರತಿನಿಧಿಗಳು ಸಂಸ್ಥಾನದ ಹೊಣೆಯನ್ನು ಹೊರುವದಾಗಿ ಆಶಿಸಿದ್ದೇನೆ. ನಮ್ಮ ಸಂಸ್ಥಾನದಲ್ಲಿ ಪ್ರೌಢ ಮತದಾನ ಪದ್ಧತಿ ಜಾರಿಯಲ್ಲಿ ಬರಬೇಕು ಮತ್ತು ಒಂದು ವರುಷದಲ್ಲಿ ಸಂಪೂರ್ಣ ಹೊಣೆಗಾರ ರಾಜ್ಯಪದ್ಧತಿ ಸ್ಥಾಪಿತವಾಗಬೇಕೆಂದು ನನ್ನ ಇಚ್ಛೆಯಾಗಿದೆ. ನನ್ನ ಪ್ರಜೆಗಳು ಯೋಗ್ಯ ರಾಜ್ಯ ಘಟನೆಯನ್ನು ಸಿದ್ಧಮಾಡಿಕೊಟ್ಟರೆ ನಾನು ಆರೀತಿಯ ರಾಜಕೀಯ ಸುಧಾರಣೆಗಳನ್ನು ಕೊಡಲು ಸಿದ್ಧನಿದ್ದೇನೆ. ಭಾಷಾವಾರ ಪ್ರಾಂತರಚನೆಯಾದಾಗ ನೂರಕ್ಕೆ ೯೦ ರಷ್ಟು ಕನ್ನಡ ಸಂಸ್ಥಾನವಾಗಿರುವ ಜಮಖಂಡಿಯು ಕರ್ನಾಟಕವನ್ನೇ ಸೇರಬೇಕು ಅಂದರೇ ಅದರ ಪ್ರಗತಿಯಾಗುವದು. ಪ್ರಜಾಪ್ರಭುತ್ವವೆ ಉತ್ತಮವಾದ ರಾಜ್ಯ ಪದ್ಧತಿ ಲೋಕನಿಯುಕ್ತ ಮಂತ್ರಿಗಳು ಪಕ್ಷಾತೀತರಾಗಿ ಕಳ್ಳಪೇಟೆಯನ್ನು ಲಂಚಗುಳಿತನವನ್ನು ನಿರ್ಮೂಲಗೊಳಿಸಲು ಪ್ರಯತ್ನಿಸಬೇಕು. ನಿಜವಾಗಿಯೂ ಸಮರ್ಥರಾದ ಮಂತ್ರಿಗಳನ್ನು ಜನರು ಆರಿಸಿಕೊಳ್ಳಬೇಕು. ಹರಿಜನೋದ್ಧಾರಕ್ಕಾಗಿ ಹೆಣಗುವದು ಕರ್ತವ್ಯ. ಹರಿಜನರಿಗೆ ದೇವಾಲಯಗಳನ್ನು ಮುಕ್ತದ್ವಾರ ಮಾಡಿರುತ್ತೇನೆ. ನೋಕರರ ಸಂಬಳ ಪ್ರಮಾಣವನ್ನು ಹೆಚ್ಚಿಸಬೇಕೆಂದು ನಿರ್ಧರಿಸಿದ್ದೇನೆ ವೈಯಕ್ತಿಕ ವೆಚ್ಚವನ್ನು ಕಡಮೆಮಾಡಿದೇನೆ. [illegible] ಇಟ್ಟುಕೊಳ್ಳಬೇಕು ಎಂದು ತಿಳಿಸಿದರು.

### ಶ್ರೀ ಫಡಕೆಯವರು ಅಧ್ಯಕ್ಷರು

ಶ್ರೀ [illegible] ಶಾಸನ ಸಭೆ [illegible] ಶ್ರೀ ಪಿ. ಎಸ್. ಫಡಕೆಯವರ, ಶಾಸನ ಸಭೆಯ ಅಧ್ಯಕ್ಷರಾಗಿ ಆರಿಸಲ್ಪಟ್ಟರು. [illegible] ಶ್ರೀ ಆರ್. ಎಸ್. ದೇಸಾಯಿಯವರು ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು. [illegible] ಮಹಾರಾಜರ [illegible] ಪ್ರದರ್ಶಿಸಲಾಯಿತು.

ಅರ್ಥ ಸಚಿವರು ೧೯೪೭—೪೮ ನೇ ಇಸ್ವಿಯ ಮುಂಗಡ ಪತ್ರವನ್ನು ಮುಂದಿಸಿದರು. ಜಹಾದ ಮೇಲೆ ಪೌಂಡಿಗೆ ಒಂದಾಣೆಯಂತೆ ಕರ ಹೇರಿ ಹಾಗು ಲೋಕಲ್ ಫಂಡ ಸೆಸ್ಸನ್ನು ಇಮ್ಮಡಿ ಮಾಡಿ ಉತ್ಪನ್ನವನ್ನು ೬೭ ಸಾವಿರ ಹೆಚ್ಚಿಸಿಕೊಳ್ಳಲಾಗಿದೆ. ೧೯೪೭ ಆಕ್ಟೋಬರ ೧ ರಿಂದ ಸರಕಾರೀ ನೋಕರರ ಸಂಬಳ ಪ್ರಮಾಣವನ್ನು ಹೆಚ್ಚಿಸಲು ೧ ಲಕ್ಷ ರೂಪಾಯಿ, ಲೋಕೋಪಯೋಗಿ ಕೆಲಸಗಳಿಗಾಗಿ ೪೦ ಸಾವಿರ ರೂಪಾಯಿ ಹೆಚ್ಚು, ಪ್ರಾಥಮಿಕ ಶಿಕ್ಷಣ ಪ್ರಸಾರಕ್ಕೆ ೨೦೦೦ ರೂಪಾಯಿ ಹೆಚ್ಚು, ಗ್ರಾಮ ಸುಧಾರಣೆಗಾಗಿ ೬೦೦೦ ರೂಪಾಯಿ ಒಕ್ಕಲತನ ಶಾಖೆ ತೆರೆಯಲು ೪೦೦೦ ರೂಪಾಯಿ ಬಾವಿಗಳನ್ನು ತೆಗೆಯಿಸಲು ೨೫೦೦ ರೂ. ತೆಗೆದಿಡಲಾಗಿದೆ. ರಾಜೇ ಸಾಹೇಬರು ತಮ್ಮ ಖಾಸಗಿ ವೆಚ್ಚವನ್ನು ೧೦೦ ಕ್ಕೆ ೧೦ ರಷ್ಟು ಸೊತ್ತು ಮಾಡಿಕೊಂಡಿದ್ದರಿಂದ ೫೬ ಸಾವಿರ ರೂಪಾಯಿಗಳು ಸಾರ್ವಜನಿಕ ಹಿತಕ್ಕಾಗಿ ದೊರೆತಿರುವುವು— ಶಾಸನ ಸಭೆಯ ಅಧಿವೇಶನ ನಡೆದಿದೆ.

ಜಮ್ಮು ಮತ್ತು ಕಾಶ್ಮೀರ ರಾಷ್ಟ್ರೀಯ ಪರಿಷತ್ತಿನ ಅಧ್ಯಕ್ಷ ಶೇಖ ಅಬ್ದುಲ್ಲಾ ಮತ್ತು ಇತರ [illegible] ಆಪಬಂಧ [illegible] ಸರಕಾರ [illegible] ಮುಕ್ತಗೊಳಿಸಲಾ[illegible]




### ಮುಂಬಯಿ

—ಭಾರತದಲ್ಲಿ ಇನ್ನು ಅನೇಕ ವರುಷಗಳ ವರೆಗೆ ಖಾಸಗಿ ಉದ್ಯೋಗಿಕ ಸಂಸ್ಥೆಗಳು ಅಗತ್ಯವಿದೆ. ಭಾರತ ಸರಕಾರವು ಉದ್ದಿಮೆಗಳ ರಾಷ್ಟ್ರೀಕರಣದ ಬಗ್ಗೆ ಯಾವದೆ ಧೋರಣವನ್ನು ತಳೆದರೂ ಅದರಿಂದ ಖಾಸಗಿ ಸಂಸ್ಥೆಗಳಿಗೆ ಯಾವದೆ ಧಕ್ಕೆಯುಂಟಾಗುವದಿಲ್ಲೆಂದು ಆಶ್ವಾಸನ ಕೊಡುವೆ ಎಂದು ಭಾರತದ ಹಣಕಾಸಿನ ಮಂತ್ರಿಗಳಾದ ಶ್ರೀ ಷಣ್ಮುಖಂ ಚೆಟ್ಟಿಯಾರರು ಹಿಂದೀ ವಣಿಕ ಸಂಘದಲ್ಲಿ ಭಾಷಣಮಾಡುತ್ತ ಹೇಳಿದರು.

ಅ. ಭಾರತ ರೇಲ್ವೆ ಫೆಡರೇಶನ್ನಿನ ಕೌನ್ಸಿಲ ಸಭೆ ಸೇರಿ ಈ ಮೊದಲು ಸಂಪಿನ ಬಗ್ಗೆ ಕೇಳಿದ ಜನಮತದ ಬಗ್ಗೆ ವಿಚಾರ ಮಾಡಲಾಯಿತು. ಈಗಿನ ಜನಮತದ ನಿರ್ಣಯದಂತೆ ಸಂಪು ಹೂಡಕೂಡದೆಂದು ನಿರ್ಧಾರಕ್ಕೆ ಬರಲಾಯಿತು.

ಈಗಿನ ಹತ್ಯಾಕಾಂಡವನ್ನು ಬೇಗನೆ ಪ್ರತಿಬಂಧಿಸದೆ ಹೋದರೆಹಿಂದುಸ್ತಾನ ಮತ್ತು ಪಾಕಿಸ್ತಾನ ಎರಡೂ ಕಾಳ್ಗಿಚ್ಚಿನಲ್ಲಿ ಬೀಳುವವಲ್ಲದೆ ಇತರ ರಾಷ್ಟ್ರಗಳೂ ಕೈಹಾಕುವ ಪ್ರಸಂಗ ಬರುವದೆಂದೂ ಇದರಿಂದ ಯಾರಿಗೂ ಕಷ್ಟ ತಪ್ಪಿದ್ದಲ್ಲೆಂದೂ ಮುಂತಾಗಿ ಹಿಂದುಸ್ತಾನ ಸರಕಾರದ ಮಂತ್ರಿಗಳಾದ ಶ್ರೀ ಗಾಡಗೀಳರು ಮುಂಬಯಿ ಪ್ರಾಂತಿಕ ಕಾಂಗ್ರೆಸ ಸಮಿತಿಯವರು ಏರ್ಪಡಿಸಿದ ಸತ್ಕಾರ ಸಮಾರಂಭದ ಕಾಲಕ್ಕೆ ಹೇಳಿದರು.

ಕರಾಚಿಯ ಓರ್ವ ವ್ಯಾಪಾರಿಯು ಮುಂಬಯಿಗೆ ವಿಮಾನದಿಂದ ಬಂಗಾರವನ್ನು ಸುಂಕದ ಕಛೇರಿಯಲ್ಲಿ ಪಾರ್ಸಲ ಸೀಲಮಾಡಿ ಟಾಂಗಾದಿಂದ ಅದನ್ನು ತೆಗೆದುಕೊಂಡು ಹೋಗುತ್ತಿರುವಾಗ ಕೆಲವರು ಅವರ ಮೇಲೆ ದಾಳಿಮಾಡಿ ಬಂಗಾರ ಅಪಹರಿಸಲು ಪ್ರಯತ್ನಿಸಿದರು. ಆದರೆ ಅವನುಜೋರಿನಿಂದ ಪಾರ್ಸಲನ್ನುಹಿಡಿದುಕೊಂಡದ್ದರಿಂದ ದೋಚಿಕೊಂಡು ಹೋಗುವದಾಗಲಿಲ್ಲ. ವ್ಯಾಪಾರಿಯು ಹಿಂದುಗಡೆ ಆಸ್ಪತ್ರೆಯಲ್ಲಿ ಸತ್ತನು.

### ಮದ್ರಾಸ

ಕರಿವೆಲ್ಲೂರಲ್ಲಿ ಕಳೆದ ಡಿಸೆಂಬರದಲ್ಲಿ ಪೋಲೀಸರ ಮೇಲೆ ದಾಳಿ ಮಾಡಿದ ಸಂಬಂಧದಲ್ಲಿ ೭೫ ಜನ ಕಮ್ಯೂನಿಸ್ಟರ ಮೇಲೆ ಹಾಕಲ್ಪಟ್ಟ ಖಟ್ಲೆಯಲ್ಲಿ ೬೨ ಜನರಿಗೆ ಬೇರೆ ಬೇರೆ ಅವಧಿಯ ಶಿಕ್ಷೆ ವಿಧಿಸಲಾಯಿತು.

ಸಬ್ ಇನಸ್ಪೆಕ್ಟರರ ಸ್ಥಳದ ಬಗ್ಗೆ ಡಿ ಆಯ ಜಿಯವರ ಸಂದರ್ಶನಕ್ಕೆ ಬಂದ ಒಟ್ಟು ಪಲವಾದ ಓರ್ವ ಉಮೇದವಾರನು ತನ್ನ ಹೆಂಡತಿಯ ಎಸ್. ಎಸ್. ಎಲ್. ಸಿ. ಸರ್ಟಿಫಿಕೇಟನಲ್ಲಿಯ ಅವಳ ಹೆಸರು ಅಳಿಸಿ ತನ್ನ ಹೆಸರು ಸೇರಿಸಿದ್ದು ಕಂಡುಬಂದಿದ್ದರಿಂದ ಅವನನ್ನು ಬಂಧಿಸಲಾಗಿರುವದು. ಅವನು ಕೊಟ್ಟ ಅರ್ಜಿ ಮಾಡಿದ್ದು ಮೂಕೀ ಅರ್ಜಿಯಿಂದ ಗೊತ್ತಾಯಿತು.

### ಸಂಯುಕ್ತಪ್ರಾಂತ

ಕಾನಪೂರದಲ್ಲಿ ೨೬ ಕ್ಕೆ ಜಾತೀಯ ಗಲಭೆ ಸಂಭವಿಸಿದ್ದರಿಂದ ಅಧಿಕಾರಿಗಳು ರಾತ್ರಿ ಗಸ್ತಿ ನಡೆಸಿ ಝಡತಿ ಹಾಗು ಬಂಧನ ನಡೆಸಿದರು. ಬಂಧಿತರಲ್ಲಿ ಸ್ಥಳೀಯ ಮುಸ್ಲಿಂಲೀಗಿನ ಅಧಿಕಾರಿ ಹಾಗು ರಾಷ್ಟ್ರೀಯ ಮುಸ್ಲಿಂ ಪಡೆಯ ಮುಖ್ಯ ಅಧಿಕಾರಿ ಇರುವರು. ೨೪ ಗಂಟೆಗಳ ಕರ್ಫ್ಯೂ ಜಾರಿಯಲ್ಲಿದೆ. ಝಡತಿಯಲ್ಲಿ ಇಬ್ಬರ ಹತ್ತರ ಲಾಯಸೆನ್ಸ ಇಲ್ಲದೆ ಶಸ್ತ್ರಾಸ್ತ್ರಗಳು ಸಿಕ್ಕಿದ್ದರಿಂದ ೩ ವರ್ಷ ಕಠಿನ ಶಿಕ್ಷೆ ವಿಧಿಸಲಾಗಿದೆ. ಈ ವರೆಗೆ ೭೦ ಪುಂಡರು ಬಂಧಿಸಲ್ಪಟ್ಟರು. ಕರ್ಫ್ಯೂ ಮುರಿದ ಬಗ್ಗೆ ೨೦೦ ಜನರು ಹಿಡಿಯಲ್ಪಟ್ಟು ೬೦ ಜನರಿಗೆ ಶಿಕ್ಷೆ ವಿಧಿಸಲಾಗಿದೆ.

ಪಾಕಿಸ್ತಾನ

### ಪೂರ್ವ ಬಂಗಾಲ

ಢಾಕಾ ನಗರದಲ್ಲಿ ಸಂಪೂರ್ಣ ಶಾಂತತೆ ಉಳಿದರೆ ಈಗ ಜಾತೀಯ ದಂಗೆಗಾಗಿ ಸೆರೆಮನೆಯಲ್ಲಿ ಕೊಳೆಯುತ್ತಿರುವವರನ್ನು ಬಿಟ್ಟುಗೊಡಲಾಗುವದು ಜಾತೀಯದಂಗೆಯ ಅಪರಾಧಕ್ಕೆ ಗುರಿಯಾದವರ ವಿಚಾರಣೆಯನ್ನು ನಡೆಸಲಾಗುವದಿಲ್ಲ— ಮತ್ತು ಹೇರಲಾಗಿದ್ದ ಸಾಮೂಹಿಕ ದಂಡವನ್ನು ವಸೂಲ ಮಾಡಲಾಗುವದಿಲ್ಲ. ಎಂದು ಮುಂತಾಗಿ ಪೂರ್ವ ಪಾಕಿಸ್ತಾನ ಸರಕಾರ ಪ್ರಕಟಿಸಿದೆ.

### ಹೊಸದಿಲ್ಲಿ

ಜುನಾಗಢ ಪ್ರಜೆಗಳ ತಾತ್ಪೂರ್ತಿಕ ಸರಕಾರದ ಅಧ್ಯಕ್ಷರಾದ ಶ್ರೀ ಶಾಮಲದಾಸ ಗಾಂಧಿಯವರು ತಮ್ಮ ಸರಕಾರದ ಧೋರಣವನ್ನು ವಿವರಿಸುತ್ತ ಅದು ಕೇವಲ ಸತ್ಯಾಗ್ರಹ ಕಾರ್ಯಕ್ರಮವನ್ನಷ್ಟೇ ಇಟ್ಟುಕೊಳ್ಳದೆ ಏಟಿಗೆ ಏಟಿನ ಹೋರಾಟವನ್ನು ನಡೆಸುವದೆಂದು ಹೇಳಿದರು.

ಹೊಸದಿಲ್ಲಿಯಲ್ಲಿರುವ ವರಿಷ್ಠ ಸೇನಾಪತಿಗಳ ಕಚೇರಿಗಳನು ಬೇಗನೆ ಮುಚ್ಚಲಾಗುವದು.

— ಆಗಷ್ಟ ೧೭ ರಿಂದ ಸಪ್ಟೆಂಬರ ೧೫ರವರೆಗೆ ೧೭ ಲಕ್ಷ ಮುಸಲ್ಮಾನೇತರ ನಿರಾಶ್ರಿತರು ಪಶ್ಚಿಮ ಪಂಜಾಬದಿಂದ ಭಾರತಕ್ಕೆ ವಿಮಾನ ಉಗಿಬಂಡಿ ಕಾಲ್ನಡಿಗೆಯಿಂದ ಬಂದಿರುವರು. ಪ್ರತಿದಿನ ಸಾವಿರಗಟ್ಟಲೆ ಜನರು ಬರುತಿದ್ದಾರೆ. ಇದೇ ಅವಧಿಯಲ್ಲಿ ಅಷ್ಟೇ ಮುಸ್ಲಿಮರು ಪೂರ್ವಪಂಜಾಬದಿಂದ ತೆರಳಿದರು.

ಸಂಯುಕ್ತ ರಾಷ್ಟ್ರಸಂಘದ ೨ನೇ ಅಧಿವೇಶನಕ್ಕೆ ಹಿಂದುಸ್ತಾನದಿಂದ ಪ್ರತಿನಿಧಿಗಳಾಗಿ ಹೋಗಿರುವವರಲ್ಲಿ ನ್ಯಾಯಮೂರ್ತಿ ಫಜಲ ಅಲ್ಲಿಯವರು ಸಂಘದ ಆಡಳಿತೆ ಹಾಗು ಆಯವ್ಯಯ ಸಮಿತಿಯ ಚೆಅರಮನರಾಗಿ ಆರಿಸಲ್ಪಟ್ಟಿದ್ದಾರೆ.

ಬಲುಚಿಸ್ತಾನದಲ್ಲಿಯ ಹಿಂದುಸ್ತಾನ ಸರಕಾರದ ಏಜಂಟರಾದ ಸರ್ ಜಾನ್ ಫ್ರಾಯರರು ಕ್ವೆಟ್ಟಾದಿಂದ ಝೂರಿಯಾತಕ್ಕೆ ಮೋಟಾರಿನಲ್ಲಿ ಹೊರಟಾಗ ಯಾರೊ ಗುಂಡು ಹಾರಿಸಿದರೆಂದೂ ಆದರೆ ಅದು ಅವರಿಗೆ ಬಡಿಯಲಿಲ್ಲೆಂದೂ ತಿಳಿಯುತ್ತದೆ.

## ಮುಧೋಳದಲ್ಲಿ ರಾಜಕೀಯ ಘೋಷಣೆ

### ರಾಜೇಸಾಹೇಬರ ಪ್ರಕಟನೆ

ಪ್ರಜೆಗಳ ಸಂತೋಷವೇ ನಿಜವಾಗಿಯೂ ಉತ್ತಮ ಸರಕಾರದ ಕಳಹದಿಯಾಗಿರುವದರಿಂದ ಮುಧೋಳ ಸಂಸ್ಥಾನದಲ್ಲಿ ಹೊಣೆಗಾರರಾಜ್ಯ ಪದ್ಧತಿಯನ್ನು ಸ್ಥಾಪಿಸುವದೇ ನನ್ನ ಧ್ಯೇಯವಾಗಿದೆಂದು ಸಾರಿ ೨೬-೮-೪೭ ಕ್ಕೆ ಹೊರಡಿಸಿದ ಘೋಷಣೆಯ ಬಗ್ಗೆ ತಪ್ಪು ತಿಳುವಳಿಕೆಯಾಗಿದ್ದರಿಂದ ನಾವು ಹೊಸ ಪ್ರಕಟನೆಯನ್ನು ಹೊರಡಿಸುತ್ತೇವೆಂದು ಹೇಳಿ ೨೩ ಕ್ಕೆ ರಾಜೇಸಾಹೇಬರು ಘೋಷಿಸಿದ್ದಾರೆ.

ಮುಧೋಳ ಸಂಸ್ಥಾನದಲ್ಲಿ ಸದ್ಯಕ್ಕೆ ಜಾರಿಯಲ್ಲಿ ತಂದ ತಾತ್ಪೂರ್ತಿಕ ವ್ಯವಸ್ಥೆಯು ಸಾಂಗಲಿ, ಹಿರಿಮಿರಜ ಸಂಸ್ಥಾನಗಳಲ್ಲಿಯ ಮಾದರಿಯನ್ನು ಅನುಸರಿಸಿ ಇದೆ. ಹೊಸ ರಾಜ್ಯಘಟನೆಯ ಕಾಯಿದೆಯನ್ನು ೧೯೪೭ ರ ಜಾನೆವರಿಯಲ್ಲಿ ಜಾರಿಯಲ್ಲಿ ತರಲಾಗುವದು. ಮತ್ತು ಅದನ್ನು ಅದಷ್ಟು ಬೇಗನೆ ಬಳಕೆಯಲ್ಲಿ ತರಲಾಗುವದು. ದಿವಾಕರ ಸಮಿತಿಯವರ ವರದಿಯನ್ನು ಮತ್ತು ಮಸೂದೆಗಳನ್ನು ಪರಿಶೀಲಿಸಿ ಅವುಗಳ ಬಗ್ಗೆ ಬರಬಹುದಾದ ಅಭಿಪ್ರಾಯಗಳನ್ನನುಲಕ್ಷಿಸಿ ಈ ಹೊಸ ರಾಜ್ಯಘಟನೆಯನ್ನು ರಚಿಸಲಾಗುವದು. ಅಲ್ಪಸಂಖ್ಯಾಕರ ಹಿತರಕ್ಷಣೆ, ಸುಂದರ ನಿಗ್ರಹ, ಅರಾಜಕತೆಗೆ ನಿರ್ಬಂಧ, ಸಾರ್ವಜನಿಕ ಸೇವೆಗಳ ಭದ್ರತೆ ಇವುಗಳಿಗೆ ಹೊಸ ರಾಜ್ಯ ಘಟನೆಯಲ್ಲಿ ಅವಕಾಶ ಕಲ್ಪಿಸಿ ಕೊಡಬೇಕಾಗಿದೆ. ಅನುಭವ ಸಾಕಷ್ಟು ಇಲ್ಲದ ಮೂಲಕ ಸಂಸ್ಥಾನದಲ್ಲಿ ಯಾವದೇ ಬಗೆಯ ಪ್ರಮಾದಗಳುಂಟಾಗಬಾರದೆಂದು ಈ ವಿಷಯಗಳನ್ನು ಕಾಯ್ದಿಡಬಾಗಿದೆಂದು ಘೋಷಿಸಲಾಗಿದೆ. ರಾಜೇಸಾಹೇಬರ ಖಾಸಗಿ ವೆಚ್ಚ ರಾಜಕುಟುಂಬದವರ ಉಂಬಳಿ ಇವನ್ನು ಬಿಟ್ಟು ಉಳಿದ ಕಾಯ್ದಿಟ್ಟ ವಿಷಯಗಳಲ್ಲಿಯೂ ಮಂತ್ರಿಗಳ ಸಲಹೆಯನ್ನು ಕೇಳಲಾಗುವುದು. ಅವರ ಅಭಿಪ್ರಾಯವನ್ನು ಸಹಾನುಭೂತಿಯಿಂದ ವಿಚಾರಿಸಲಾಗುವದು. ದಿವಾಕರ ಸಮಿತಿಯವರು ತಯಾರಿಸಿದ ವರದಿಯನ್ನೂ ಮಸೂದೆಯನ್ನೂ ಸಾರ್ವಜನಿಕರಿಗಾಗಿ ಇಂಗ್ಲಿಶ, ಮರಾಠಿ, ಕನ್ನಡ ಭಾಷೆಗಳಲ್ಲಿ ಬೇಗನೆ ಪ್ರಸಿದ್ಧಿಸಲಾಗುವದು. ಸಂಸ್ಥಾನದ ಪ್ರಗತಿಯ ಕಾರ್ಯದಲ್ಲಿ ಪ್ರಜೆಗಳೆಲ್ಲ ಸಹಕಾರ ನೀಡಬೇಕೆಂದು ಹೇಳಿ ಇನ್ನು ಮುಂದೆ ಇತರ ಸಂಸ್ಥಾನಗಳ ಗೊಡ ಮಾಡಿಕೊಳ್ಳಬಹುದಾದ ಒಡಂಬಡಿಕೆಯನ್ನು ಮಂತ್ರಿಗಳ ಸಲಹೆಯೊಂದಿಗೆ ಮಾಡಿಕೊಳ್ಳಲಾಗುವದೆಂದು ಹೇಳಿದರು.

ಈ ಘೋಷಣೆಯು ಪ್ರಗತಿಪರವಾಗಿದೆಂದು ಎಲ್ಲೆಲ್ಲಿಯೂ ಹೇಳಲಾಗುತ್ತದೆ. ಪ್ರಜಾ ಸಂಘದ ಕಾರ್ಯಕಾರಿ ಮಂಡಳದ ಸಭೆ ಸೇರಿ ಈ ಘೋಷಣೆಯು ನಿಶ್ಚಯವಾಗಿ ಪ್ರಗತಿಪರವಾಗಿದೆಂದು ಅಭಿಪ್ರಾಯಪಡಲಾಯಿತು.

### ಗಾಂಧೀಜಿ

( ೭೯ ನೆಯ ಹುಟ್ಟುಹಬ್ಬದಲ್ಲಿ )



೧

ಈತನಭಿನವ ಬುದ್ಧ, ನೀತ ಕಾರಣ ಪುರುಷ,  
ಸೋತು ಗೆಲುವ ವಿದಗ್ಧ, ಸಂಪ್ರಬುದ್ಧ;  
ಭೀತರನು ಕಾವನಿರ್ಭೀತಾತ್ಮನೀತನವ  
ನೀತ ಕೋಮಲ ಹೃದಯ, ನಮ್ಮ ಸಿದ್ಧ!

೨

ಸ್ವಾತಂತ್ರ್ಯ ಸಮರ ಪಂಡಿತ, ಸರ್ವ ಧರ್ಮ ಸಹ  
ನಾ ತತ್ವ ಮಂಡಿತ, ವದಾನ್ಯವರ್ಯ;  
ಭೂತ ಭೌತಿಕ ಕಾರ್ಯ ಕಾರಣ ಕಲಾವೇತ್ತ,  
ನೂತನ ವಿಭೂತಿ, ನರಲೋಕದಾರ್ಯ!

೩

ಭಾರತದ ಭಾಗ್ಯ ಚಕ್ರವ ತಿರುಗಿಸಿದ ತಂತ್ರ  
ಸಾರ, ಸರ್ವೋದ್ಧಾರ, ಶಾಂತವೀರ;  
ದೂರ ದರ್ಶನ, ದುಗ್ಧಹಾಸ, ಮೋಹನದಾಸ,  
ಆರು ಹಗೆಗಳ ಗೆದ್ದ ಕಾರ್ಯಶೂರ!

೪

ಹಿಡಿದು ಸತ್ಯಾಹಿಂಸೆಯಸ್ತ್ರಗಳ, ದುರ್ಮನಕೆ  
ಕೆಡೆದ ಕಥನಕಪಾಲಿ, ಕರ್ಮಯೋಗಿ;  
ನುಡಿದಂತೆ ನಡೆವ ನವದೇವ ಮಾನವ, ನಮ್ಮ  
ಜಡೆಯಿರದ ತವಸಿ, ದಿವ್ಯಾನುರಾಗಿ!

೫

ಈತ ನೂರೈವತ್ತು ವರ್ಷ ಬಾಳಲಿ ದೇವ  
ಗೀತ ಯತನಾಗಿ ಭಾರತ ವಿಧಾತ;  
ನೀತಿ ನಭದುತ್ಪಥದಿವಾಕರ, ನವೀನ ಮನು  
ವೀತ, ಪಾವನಚರಿತ ಶಾಂತಿ ದೂತ!

—ಬ. ಹೆ. ಶ್ರೀ.

### ಪಶ್ಚಿಮ ಬಂಗಾಲ

ಪೂರ್ವ ಬಂಗಾಲದಲ್ಲಿಯ ಹಿಂದುಗಳನು ಪಶ್ಚಿಮ ಬಂಗಾಲಕ್ಕೆ ಸ್ಥಳಾಂತರಿಸಬೇಕೆಂದು ಬಂಗಾಲ ಪ್ರಾಂತೀಯ ಹಿಂದೂ ಮಹಾಸಭೆಯವರು ಬಿನ್ನವಿಸಿಕೊಂಡಿದ್ದಾರೆ.

ಕಲಕತ್ತೆಯಲ್ಲಿ ಶಾಂತಿ ಸೌಹಾರ್ದದ ವಾತಾವರಣವನ್ನು ನಿರ್ಮಿಸಲು ಕಲಕತ್ತೆಯ ಪೋಲೀಸ ಕಚೇರಿಯವರು ದೇಶಭಕ್ತ ಕ್ರಾಂತಿಕಾರಕರ ಶಸ್ತ್ರಾಸ್ತ್ರಗಳ ಪ್ರದರ್ಶನವನ್ನು ಏರ್ಪಡಿಸಿದ್ದಾರೆ. ಕ್ರಾಂತಿಕಾರರು ಇಂದಿನ ವರೆಗೆ ಉಪಯೋಗಿಸಿದ ಅನೇಕ ಸಂಸ್ಮರಣೀಯ ಶಸ್ತ್ರಾಸ್ತ್ರಗಳನ್ನು ಇದರಲ್ಲಿ ಪ್ರದರ್ಶಿಸಲಾಗಿದೆ.

ಕಲಕತ್ತೆಯ ಸರಕಾರೀ ಭವನದ ಸಂಗಮರವರೀ ಮಂಟಪದಲ್ಲಿ ೨೯ನೇ ರಾತ್ರಿ ಅನಿಲಬಚ್ಚ ಮತ್ತು ಅವರ ಶಿಷ್ಯರಿಂದ ಭಜನೆ ಸಂಕೀರ್ತನ ನಡೆಯಿತು. ಗವರ್ನರ ರಾಜಾಜಿ ಅವರ ಮನೆಯವರು ಅನೇಕ ಅತಿಥಿಗಳು ಮತ್ತು ಅಧಿಕಾರಿಗಳು ಭಜನೆ ಕೇಳಲು ಉಪಸ್ಥಿತರಿದ್ದರು.

### ಸಂಸ್ಥಾನಗಳು

ಪುದುಕೋಟೆಯ ಮಹಾರಾಜರು ಘೋಷಣೆಯೊಂದನ್ನು ಮಾಡಿ ಸಂಸ್ಥಾನದಲ್ಲಿ ಪೂರ್ಣ ಹೊಣೆಗಾರ ಸರಕಾರ ಸ್ಥಾಪಿಸಲಾಗುವದೆಂದು ಸಾರಿದ್ದಾರೆ.

ಪೋರಬಂದರದ ಮಹಾರಾಜರು ಪ್ರಕಟನೆಯನ್ನು ಹೊರಡಿಸಿ ಕಾಠೇವಾಡ ಪ್ರಜೆಗಳ ಹಿತದ ದೃಷ್ಟಿಯಿಂದ ಅದರಲ್ಲೂ ವಿಶೇಷವಾಗಿ ಪ್ರಜೆಗಳ ಹಿತದ ದೃಷ್ಟಿಯಿಂದ ಜುನಾಗಢವು ಹಿಂದೀ ಒಕ್ಕೂಟದಲ್ಲಿ ಸೇರುವದು ಯೋಗ್ಯವಾಗಿದೆಂದು ಹೇಳಿದ್ದಾರೆ. ಜುನಾಗಢದ ನವಾಬರು ಇನ್ನೊಮ್ಮೆ ವಿಚಾರ ಮಾಡಬೇಕೆಂದೂ ಸೂಚಿಸಿದ್ದಾರೆ.

## ಓರಣ, ಹೊಣೆಯ ಅವಶ್ಯಕತೆ

### ಸ್ವಯಂಸೇವಕರ ಕರ್ತವ್ಯದ ಬಗ್ಗೆ

### ಮಾನ್ಯ ಮುರಾರ್ಜಿಯವರ ಅಭಿಪ್ರಾಯ

'ಶಿಸ್ತು, ಓರಣಗಳಿಗೆ ಹೆಚ್ಚು ಮಹತ್ವ ಕೊಡತಕ್ಕದ್ದು ಮತ್ತು ಪ್ರತಿಯೊಬ್ಬ ಸ್ವಯಂಸೇವಕನೂ ತನ್ನ ಹೊಣೆಗಾರಿಕೆಯನ್ನು ಅರಿತುಕೊಳ್ಳಬೇಕು' ಎಂಬುದಾಗಿ ಮುಂಬಯಿಯಲ್ಲಿಯ ಸೇವಾದಲ ಸ್ವಯಂಸೇವಕರ ಶಿಕ್ಷಣ ಶಿಬಿರದ ಮುಕ್ತಾಯ ಸಮಾರಂಭದ ಕಾಲಕ್ಕೆ ಕಳೆದ ೨೮ ರಲ್ಲಿ ಅಪ್ಪಣೆ ಕೊಡಿಸಿದರು.

ಮುಂದುವರಿಯುತ್ತ 'ಹಿಂದುಸ್ತಾನವಿಂದು ಸ್ವತಂತ್ರವಾಗಿ ಆಡಳಿತ ಸೂತ್ರಗಳನ್ನು ನಡೆಸುತ್ತಿದೆ. ಈ ಪರಿಸ್ಥಿತಿಯಲ್ಲಿ ಸ್ವಯಂಸೇವಕ ಸಂಘಗಳ ಅವಶ್ಯಕತೆಯೇನು ಎಂಬುದಾಗಿ ಟೀಕಿಸಲಾಗುತ್ತದೆ. ಆದರೆ ದೇಶದ ಸದ್ಯದ ಪರಿಸ್ಥಿತಿಯನ್ನು ಮತ್ತು ದೊರೆತ ಸ್ವಾತಂತ್ರ್ಯವನ್ನು ಸುಸ್ಥಿರವಿಟ್ಟುಕೊಳ್ಳಬೇಕಾದರೆ ಇಂಥ ಸಂಸ್ಥೆಗಳ ಅವಶ್ಯಕತೆ ಹಿಂದಿನಕ್ಕಿಂತ ಹೆಚ್ಚು ಇದೆ' ಎಂದು ನುಡಿದರು.

'ಆತ್ಯಂತಿಕ ಓರಣ ಪ್ರಜಾ ಪ್ರಭುತ್ವದ ಸಾರವಾಗಿದೆ, ಈ ಓರಣವನ್ನು ಯೋಗ್ಯ ರೀತಿಯಿಂದ ಅರಗಿಸಿಕೊಂಡಿದ್ದಾದರೆ ಹಳ್ಳಿಗರಲ್ಲಿ ನಾಗರಿಕತ್ವದ ಅರಿವನ್ನುಂಟುಮಾಡಲು ಅದು ಸಹಾಯಕವಾಗುವದು. ತಮ್ಮ ಹಕ್ಕು ಬಾಧ್ಯತೆ ಮತ್ತು ಹೊಣೆಗಾರಿಕೆಯ ನಿಜವಾದ ಅರಿವು ಅವರಲ್ಲಿ ಉಂಟಾಗಿ ಸ್ವತಂತ್ರ ಮತ್ತು ಸುಸಂಸ್ಕೃತ ನಾಗರಿಕರೆಂದು ಕಾರ್ಯ ನಿರ್ವಹಿಸಲು ಸಮರ್ಥರಾಗುವಂತಾಗಬೇಕು ಹಳ್ಳಿಗಳೆಲ್ಲ ಆಡಳಿತದ ಘಟಕಗಳಾಗಿ ಅಧಿಕಾರಸೂತ್ರಗಳನ್ನು ವಹಿಸಿಕೊಳ್ಳುವಂತಾದರೆ ಮಾತ್ರ ದೇಶದಲ್ಲಿ ನಿಜವಾದ ಪ್ರಜಾಪ್ರಭುತ್ವ ಪ್ರಸ್ಥಾಪಿತವಾದಂತಾಗುವದು. ಈ ಶಿಕ್ಷಣ ಕೇಂದ್ರದಲ್ಲಿ ತರಬೇತಿ ಹೊಂದಿದ ಸೈನಿಕರು ಹಳ್ಳಿಗಳಿಗೆ ಹೋಗಿ ಈ ಧ್ಯೇಯಸಿದ್ಧಿಗಾಗಿ ಹೆಣಗುವರೆಂದು ತುಂಬ ಆಶಿಸಲಾಗಿದೆ' ಎಂದು ಮುಂತಾಗಿ ಹೇಳಿ ಮಂತ್ರಿವರ್ಯರು ಮಾತು ಮುಗಿಸಿದರು.

ಶಿಬಿರಾಧಿಪತಿಗಳಾದ ಡಾ. ಎನ್. ಎಸ್. ಹರ್ಡೀಕರರು ಮಂತ್ರಿ ವರ್ಯರಿಗೆ ಮತ್ತು ಎಲ್ಲ ಬಗೆಯ ಸಾಹಾಯ್ಯಗಳನ್ನೊದವಿಸಿಕೊಟ್ಟದ್ದಕ್ಕಾಗಿ ಮುಂಬಯಿ ಪ್ರಾಂತೀಯ ಕಾಂಗ್ರೆಸ್ ಸಮಿತಿಗೆ ಧನ್ಯವಾದಗಳನ್ನರ್ಪಿಸಿದರು. ಸ್ವಯಂಸೇವಕರು ರಾಷ್ಟ್ರೀಯ ಸೇವಾ ಭಾವನೆಯಿಂದ ಪ್ರೇರಿತರಾಗಿದ್ದು ದೇಶಸೇವೆಗಾಗಿ ಶಕ್ತಿಮೀರಿ ಪ್ರಯತ್ನಿಸುವರು. ಹಿಂದುಸ್ತಾನದ ಪುನರುಜ್ಜೀವನಕ್ಕಾದ ಕಠಿನ ಕೆಲಸವನ್ನು ಅವರು ಯೋಗ್ಯ ರೀತಿಯಿಂದ ನಿರ್ವಹಿಸುವರೆಂದು ಆಶಿಸುತ್ತೇನೆಂದು ಮುಂತಾಗಿಯೂ ಡಾಕ್ಟರರು ಹೇಳಿದರು.

---

## ಬ್ರಿಟಿಶ ಮಂತ್ರಿಮಂಡಲದಲ್ಲಿ ಕ್ರಿಪ್ಸರ ಪ್ರವೇಶ

ಬ್ರಿಟಿಶ ಮಂತ್ರಿಮಂಡಲದಲ್ಲಿ "ಆರ್ಥಿಕ ವಿಚಾರ"ವೆಂಬೊಂದು ಹೊಸ ಭಾಗವನ್ನು ನಿರ್ಮಿಸಿ ಅದನ್ನು ನೋಡಿಕೊಳ್ಳಲು ಸರ್ ಸ್ಟ್ಯಾಫರ್ಡ್ ಕ್ರಿಪ್ಸರನ್ನು ಮಂತ್ರಿಗಳನ್ನಾಗಿ ತೆಗೆದುಕೊಳ್ಳಲಾಗಿದೆಯೆಂದು ಬ್ರಿಟಿಶ ಮುಖ್ಯ ಪ್ರಧಾನರು ಸೆಪ್ಟಂಬರ ೨೯ ರ ಮಧ್ಯರಾತ್ರಿಯಲ್ಲಿ ಸಾರಿದರು. ಸರ್ ಸ್ಟ್ಯಾಫರ್ಡ್ ಕ್ರಿಪ್ಸರು ಕೌನ್ಸಿಲಿನ ಶ್ರೀಮಂತ ಅಧ್ಯಕ್ಷರಾದ ಶ್ರೀ ಹರ್ಬರ್ಟ್ ಮಾರಿಸನ್ನರಿಂದ ಗೃಹಕೃತ್ಯದ ಆರ್ಥಿಕ ವ್ಯವಸ್ಥಾಪನದ ಜವಾಬ್ದಾರಿಯನ್ನು ವಹಿಸಿಕೊಳ್ಳುವರೆಂದು ಗೊತ್ತಾಗುತ್ತದೆ. ಅವರದೇ ಆದ ಒಂದು ಹೊಸ ಶಾಖೆಯೇರ್ಪಡುವುದಿಲ್ಲವಾದರೂ ಅವರ ಕಾರ್ಯಕ್ಕೆ ಕೇಂದ್ರ ಆರ್ಥಿಕ ಯೋಜನಾ ಕಾರ್ಯಕರ್ತರು ಮತ್ತು ಮಂತ್ರಿಮಂಡಲದ ಆರ್ಥಿಕ ವಿಭಾಗದ ಗುಮಾಸ್ತ ವರ್ಗದವರು ಸಹಾಯವೊದಗಿಸುವರೆಂದು ಹೇಳಲಾಗಿದೆ. ಒಂದು ಹೊಸ ಆರ್ಥಿಕ ಮಂತ್ರಾಲೋಚನಾ ಸಭೆ ನಿರ್ಮಿತವಾಗಲಿದೆಯೆಂದೂ ಅದು ಒಳ ಹೊರಗಿನ ಪ್ರಮುಖ ಆರ್ಥಿಕ ಪ್ರಶ್ನೆಗಳನ್ನು ಮುಖ್ಯ ಪ್ರಧಾನರ ಅಧ್ಯಕ್ಷತೆಯಲ್ಲಿ ಬಿಡಿಸಲು ಯತ್ನಿಸುವುದೆಂದೂ ಹೇಳಲಾಗಿದೆ. ಬ್ರಿಟನ್ನಿನ ಸಂಪೂರ್ಣ ಆರ್ಥಿಕ ಧೋರಣವನ್ನು ಸುಸಂಬದ್ಧವಾಗಿ ರಚಿಸುವ ಕಾರ್ಯಕ್ಕಾಗಿ ಸರ್ ಸ್ಟ್ಯಾಫರ್ಡರಿಗೆ ವ್ಯಾಪಾರ ಸಂಘ, ಪೂರಯಿಕೆಯ ಶಾಖೆ, ಶ್ರಮಶಾಖೆ, ಸಾದೆ ಮತ್ತು ವಿದ್ಯುತ್ತಿನ ಶಾಖೆ ಮತ್ತು ವಾಹನ ಶಾಖೆಗಳ ಮೇಲ್ವಿಚಾರಣೆಯ ಅಧಿಕಾರವನ್ನು ಕೊಡಲಾಗುತ್ತದೆ. ಹೀಗೆ ಕ್ರಿಪ್ಸರನ್ನು ಪುನರುತ್ಥಾಪಕ ಮಂತ್ರಿಯೆಂದು ತೆಗೆದುಕೊಂಡು ಅವರ ಪ್ರಯತ್ನಗಳ ಮೂಲಕ ಇಂದು ಬ್ರಿಟನ್ನು ಬಿಕ್ಕಟ್ಟಿನಿಂದ ಪಾರಾಗಬಹುದೆಂದು ಬ್ರಿಟಿಶ ಮಂತ್ರಿಮಂಡಲ ನಂಬಿದೆ.

## ಮುಂಬಯಿ ಶಾಸನ ಸಭೆ

### ವಾಯದೆ ವ್ಯವಹಾರ ನಿಯಂತ್ರಣ

### ಪ್ರಾಥಮಿಕ ಶಿಕ್ಷಣ ಮಸೂದೆ ಪರಿಶೀಲಕ ಸಮಿತಿಗೆ

ಮುಂಬಯಿ ಶಾಸನ ಸಭೆ ಮುಂದುವರಿದಿದೆ. ವಾಯದೆ ವ್ಯವಹಾರ ನಿಯಂತ್ರಣ ಹಾಗು ಸಟ್ಟಾ ಪ್ರತಿಬಂಧಕ ಮಸೂದೆಯನ್ನು ಪರಿಶೀಲಕ ಸಮಿತಿಗೆ ಒಪ್ಪಿಸಬೇಕೆಂಬ ಅರ್ಥಸಚಿವರು ಮಂಡಿಸಿದ ಗೊತ್ತುವಳಿ ೨೭ಕ್ಕೆ ಸ್ವೀಕೃತವಾಯಿತು. ಅಕ್ಟೋಬರ ೧೩ರೊಳಗಾಗಿ ವರದಿಯನ್ನೊಪ್ಪಿಸಬೇಕೆಂದು ಗೊತ್ತಾಗಿದೆ. ಚರ್ಚೆಗೆ ಉತ್ತರ ಕೊಡುತ್ತ ಮಂತ್ರಿಗಳು, ಸರಕಾರದವರು ಇಷ್ಟು ದಿನ ತಟಸ್ಥ ಧೋರಣ ವಹಿಸಿದ್ದರಿಂದ ಒಕ್ಕಲತನ ಸರಕುಗಳ ಮಾರಾಟದಲ್ಲಿ ಎಲ್ಲ ಬಗೆಯ ಅನಿಷ್ಟಗಳು ಸೇರಿಕೊಂಡಿವೆ. ಈಗ ಸರಕಾರದವರು ಆ ಧೋರಣವನ್ನು ಬಿಟ್ಟುಕೊಟ್ಟು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಹೊರಟಿರುವರೆಂದೂ ವ್ಯಾಪಾರಿ ಹಿತ ಸಂಬಂಧದವರು ವಿಧಾಯಕ ಸೂಚನೆಗಳನ್ನು ಮಾಡಿದಲ್ಲಿ ಅವುಗಳನ್ನು ವಿಚಾರಿಸಲಾಗುವದೆಂದೂ ಹೇಳಿದರು. ಸಟ್ಟಾ ವ್ಯವಹಾರವನ್ನು ಪೂರ್ಣ ನಿಲ್ಲಿಸಿಬಿಡಬೇಕೆಂಬ ಸೂಚನೆ ಬಂದಿದೆ. ಸರಕಾರದವರೂ ಅದೇ ಉದ್ದೇಶವನ್ನಿಟ್ಟುಕೊಂಡಿದ್ದಾರೆ. ಆದರೆ ಮೊದಲು ಅದನ್ನು ನಿಯಂತ್ರಿಸಿ ಆ ಮೇಲೆ ರದ್ದುಪಡಿಸುವದು ಸುಲಭವಾದ್ದರಿಂದ ನಿಯಂತ್ರಣ ಮಸೂದೆಯನ್ನು ತರಲಾಗಿದೆಂದೂ ಸ್ಪಷ್ಟೀಕರಿಸಲಾಯಿತು.

### ಪ್ರಾಥಮಿಕ ಶಿಕ್ಷಣ ಮಸೂದೆ

"ಮುಂಬಯಿ ಪ್ರಾಂತದಲ್ಲಿ ಇನ್ನು ಹತ್ತು ವರುಷಗಳಲ್ಲಿ ಸಾಕಷ್ಟು ಸಮರ್ಥವಾದ ಪ್ರಾಥಮಿಕ ಶಿಕ್ಷಣವು ಕಂಡು ಬರುವದೆಂದು ಹಾರೈಸುತ್ತೇನೆ. ಇಡೀ ಪ್ರಾಂತದಲ್ಲಿ ಒತ್ತಾಯದ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸಬೇಕೆಂಬ ದೃಷ್ಟಿಯಿಂದಲೆ ನಾವು ಕಾರ್ಯಪ್ರವೃತ್ತರಾಗಿದ್ದೇವೆ" ಎಂದು ಶಿಕ್ಷಣ ಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ಮುಂಬಯಿ ಪ್ರಾಥಮಿಕ ಶಿಕ್ಷಣ ಮಸೂದೆಯ ಪ್ರಥಮ ವಾಚನದ ಕಾಲಕ್ಕೆ ಹೇಳಿದರು. ಮಂತ್ರಿವರ್ಯರು ಪ್ರಾಥಮಿಕ ಶಿಕ್ಷಣ ಕಾಯದೆಯಲ್ಲಿ ಆಗಾಗ ಆದ ತಿದ್ದುಪಡಿಗಳನ್ನು ವಿವರಿಸುತ್ತ ೧೯೩೮ ರಲ್ಲಿ ಆದ ತಿದ್ದುಪಡಿಯಿಂದ ಸುಧಾರಣೆಯ ಬದಲು ಪ್ರಗತಿಯು ಕುಂಠಿತವಾಗಿದೆಂದು ಕಂಡು ಬಂದದ್ದರಿಂದ ಈ ಮಸೂದೆಯನ್ನು ತರಲಾಗಿದೆಂದು ಹೇಳಿದರು. ಆದರೆ ಸಂಪೂರ್ಣ ಹೊಣೆಯನ್ನು ವಹಿಸಿಕೊಳ್ಳುವದು ಸರಕಾರಕ್ಕೆ ಸಾಧ್ಯವಿಲ್ಲದ್ದರಿಂದ ಸ್ಕೂಲ ಬೋರ್ಡ ಯಂತ್ರವನ್ನು ಹಾಗೆಯೆ ಇಟ್ಟುಕೊಂಡು ಅಧ್ಯಕ್ಷರಿಗೆ ಆಡಳಿತದ ಅನುಭವ ದೊರೆತು ಕೊಡಬೇಕೆಂಬ ಧೋರಣವಿಟ್ಟುಕೊಳ್ಳಲಾಗಿದೆಂದು ಹೇಳಿದರು. ಸಾಲೆಗೆ ಹೋಗುವ ವಯಸ್ಸಿನ ೧೬ ಲಕ್ಷ ಮಕ್ಕಳನ್ನು ಸಾಲೆಗೆ ಸೇರಿಸುವ ಪ್ರಶ್ನೆಯಿದೆ. ಒಟ್ಟಿಗೆ ೩೬ ಲಕ್ಷ ಸಾಲೆಗೆ ಹೋಗುವವರ ವಯಸ್ಸಿನ ಮಕ್ಕಳಲ್ಲಿ ೨೬ ಲಕ್ಷ ಮಕ್ಕಳು ಜಿಲ್ಲಾ ಬೋರ್ಡಿನ ವಶಕ್ಕಿದ್ದ ಸಾಲೆಗಳಿಗೆ ಹೋಗಬೇಕಾಗುತ್ತದೆ. ಇವರಿಗಾಗಿ ೯॥ ಕೋಟಿ ರೂ. ವೆಚ್ಚವಾಗುತ್ತದೆ. ಇದರಲ್ಲಿ ಜಿಲ್ಲಾ ಬೋರ್ಡಿನವರು ತೀರ ಹೆಚ್ಚೆಂದರೆ ೩೬ ಲಕ್ಷ ರೂಪಾಯಿ ವೆಚ್ಚ ಮಾಡುತ್ತಾರೆ. ಇಷ್ಟು ವೆಚ್ಚದಲ್ಲಿ ಸರಕಾರ ನೂರಕ್ಕೆ ೯೬ ರಷ್ಟನ್ನು ವಹಿಸಬೇಕಾಗುವದೆಂದು ಹೇಳಲಾಯಿತು. ಪ್ರಾಥಮಿಕ ಶಿಕ್ಷಕರ ನೇಮಕ ವರ್ಗಾವರ್ಗಿ ಮುಂತಾದ್ದನ್ನೆಲ್ಲ ಸ್ಟಾಫ ಸಿಲೆಕ್ಶನ್ ಬೋರ್ಡಿಗೆ ಒಪ್ಪಿಸಲಾಗುವದು ಸ್ಥಾನಿಕ ಸಂಸ್ಥೆಗಳು ಸ್ಕೂಲಬೋರ್ಡಗಳನ್ನು ರಚಿಸಿಕೊಂಡು ತಮ್ಮ ಪಾಲಿನ ಹಣ ಒಪ್ಪಿಸಿದರೆ ತೀರಿತು ಉಳಿದ ಯಾವ ಹೊಣೆಗಾರಿಕೆ ಅವರ ಮೇಲೆ ಇಲ್ಲ ಎಂದೂ ಹೇಳಿದರು. ಕೆಲವರು ಈ ಮಸೂದೆ ಅಷ್ಟೊಂದು ಪ್ರಗತಿಪರವಾಗಿಲ್ಲೆಂದು ಟೀಕಿಸಿದರು. ಉಪಾಧ್ಯಕ್ಷರಾದ ಶ್ರೀ ಅಂಗಡಿಯವರು ಶಿಕ್ಷಣದಲ್ಲಿ ಪ್ರಗತಿಯಾಗದಿದ್ದುದಕ್ಕೆ ಸ್ಕೂಲ ಬೋರ್ಡುಗಳ ಆಡಳಿತೆ ಕಾರಣವಲ್ಲ ಸಾಕ್ಷರತೆ ಪ್ರಮಾಣ ಸಾಕಷ್ಟು ಇಲ್ಲದಿದ್ದದ್ದು ಕಾರಣವಾಗಿದೆಂದು ಅಭಿಪ್ರಾಯಪಟ್ಟು ಸದ್ಯದ ಮಸೂದೆಯಲ್ಲಿಯ ಕೆಲವು ಕಲಮುಗಳನ್ನೂ ಟೀಕಿಸಿ ಶಿಕ್ಷಣದ ಬಗ್ಗೆ ನಮಗೆ ನಿಜವಾಗಿ ಕಳಕಳಿಯಿದ್ದರೆ ಅದಕ್ಕಾಗಿ ನೀರಿನಂತೆ ಹಣ ವೆಚ್ಚ ಮಾಡಬೇಕೆಂದು ಹೇಳಿದರು. ಶಿಕ್ಷಣ ಮಂತ್ರಿಗಳು ಆಕ್ಷೇಪಗಳಿಗೆಲ್ಲ ಉತ್ತರ ಕೊಟ್ಟ ಬಳಿಕ ಮಸೂದೆಯನ್ನು ಪರಿಶೀಲಕ ಸಮಿತಿಗೆ ಒಪ್ಪಿಸಲಾಯಿತು. ಈ ಸಮಿತಿಯವರು ೧೦ ದಿನಗಳಲ್ಲಿ ವರದಿಯನ್ನು ಒಪ್ಪಿಸಬೇಕೆಂದು ಗೊತ್ತಾಗಿದೆ.

## ಹಿಂದುಸ್ತಾನದಲ್ಲಿ ಆಹಾರದ ಬಿಕ್ಕಟ್ಟು

ಹಿಂದುಸ್ತಾನದ ಆಹಾರ ಪರಿಸ್ಥಿತಿ ಬಹಳ ಗಂಭೀರವಾಗಿರುವದು. ಆಹಾರ ಸಂಗ್ರಹ ಬಹಳ ಕಡಿಮೆಯಾಗಿದ್ದರಿಂದ ರಾಷ್ಟ್ರವು ಆಗಾಗ್ಗೆ ಸೀದಾ ಪದ್ಧತಿ ನಿಂತುಹೋಗುವುದನ್ನಲ್ಲದೆ, ಸದ್ಯಕ್ಕೆ ಕೊಡಲಾಗುತ್ತಿರುವ ಆಹಾರ ಪ್ರಮಾಣದಲ್ಲಿ ಕತ್ತರಿ ಪ್ರಯೋಗವನ್ನು ಸಹ ಎದುರಿಸಲು ಸಿದ್ಧವಾಗಬೇಕೆಂದು ಆಹಾರ ಮಂತ್ರಿ ಡಾ. ರಾಜೇಂದ್ರ ಪ್ರಸಾದರು ಎಚ್ಚರಿಕೆ ಕೊಟ್ಟರು.

ಡಾ. ರಾಜೇಂದ್ರ ಪ್ರಸಾದರು ಮತ್ತೂ ಹೇಳಿದ್ದೇನೆಂದರೆ:—

"ರಾಷ್ಟ್ರದ ಆಹಾರ ಪರಿಸ್ಥಿತಿ ಚಿಂತನೆಗೆ ಕಾರಣವಾಗಿದೆ. ಕಠಿಣ ಕಾಲ ಬರಬಹುದು. ಇದ್ದುದರಲ್ಲಿಯೇ ಸಂತೋಷದ ಸಂಗತಿಯೆಂದರೆ ಕೊರತೆಯ ಕಾಲ ಅತ್ಯಲ್ಪ. ಇನ್ನು ೮-೧೦ ವಾರಗಳಲ್ಲಿ ಹೊಸ ಬೆಳೆ ಕೈಗೆ ಬರುವದರಿಂದ ಕೆಲವು ವಾರ ಮಾತ್ರ ಕಠಿಣ ಹೋಗಬಹುದು.

ಆದಾಗ್ಯೂ ಸ್ವದೇಶ ಮತ್ತು ಪರದೇಶಗಳಲ್ಲಿ ಸಿಗುವಷ್ಟು ಧಾನ್ಯವನ್ನು ತರಿಸಿ ಸಂಗ್ರಹಿಸುತ್ತಿದ್ದೇವೆ. ಆದರೂ ನವಂಬರ ತಿಂಗಳ ಪ್ರಾರಂಭದಲ್ಲಿ ಹಲವು ಪ್ರಾಂತಗಳಲ್ಲಿ ಎರಡು ವಾರಗಳ ಸಂಗ್ರಹ ಸಹ ಉಳಿಯುವದಿಲ್ಲ. ಆದರೆ ಇಂಥ ಪ್ರಾಂತಗಳಿಗೆ ಆ ತಿಂಗಳು ಅಷ್ಟೇ ಆಹಾರವೆಂದು ತಿಳಿದುಕೊಳ್ಳಬಾರದು. ಆ ತಿಂಗಳಲ್ಲಿ ಸಹ ಧಾನ್ಯವನ್ನು ಸಂಗ್ರಹಿಸಿ ಕಳಿಸಲಾಗುವದು. ನವಂಬರ ತಿಂಗಳು ಪ್ರಾರಂಭವಾಗುವ ಮೊದಲೇ ಕೆಲವು ಸ್ಥಳಗಳಲ್ಲಿ ಸೀದಾ ಪದ್ಧತಿ ನಿಲ್ಲಬಹುದು. ಆದರೂ ಅಂಥ ಪ್ರಸಂಗ ತಪ್ಪಿಸಲು ಸಾಧ್ಯವಿದ್ದ ಪ್ರಯತ್ನ ಮಾಡುತ್ತೇವೆ. ಕೆಲವು ಕಡೆ ಸೀದಾ ಪ್ರಮಾಣವನ್ನು ಕಡಿಮೆ ಮಾಡುವ ಪ್ರಸಂಗ ಬಂದರೆ, ಅದು ಎಂಟು ಔನ್ಸಿಗಿಂತ ಕಡಿಮೆಯಾಗದಂತೆ ನೋಡಿಕೊಳ್ಳುವೆವು.

ಹಿಂದುಸ್ತಾನ ಸರಕಾರವು ಅಕ್ಟೋಬರ ತಿಂಗಳ ಮೂರನೇ ವಾರದಲ್ಲಿ ಅಸ್ಟ್ರೇಲಿಯಾಕ್ಕೆ ಆಹಾರ ಶಿಷ್ಟಮಂಡಲ ಕಳಿಸುವುದು. ನನ್ನ ಆರೋಗ್ಯ ಸರಿಯಾಗಿದ್ದರೆ, ನಾನೇ ಶಿಷ್ಟಮಂಡಲದ ಧುರೀಣನಾಗುವೆ. ಅಲ್ಲಿಂದ ವರ್ಷಕ್ಕೆ ಹತ್ತು ಲಕ್ಷ ಟನ್ ಗೋದಿ ಕನಿಷ್ಠ ಒಂದು ವರುಷದ ಮಟ್ಟಿಗಾದರೂ ದೊರಕಿಸುವಂತೆ ಅಸ್ಟ್ರೇಲಿಯದೊಡನೆ ಕರಾರು ಮಾಡಿಕೊಳ್ಳಬೇಕೆಂದಿದ್ದೇವೆ. ಇದರ ಹೊರತು ಮಾಸ್ಕೋದಲ್ಲಿರುವ ನಮ್ಮ ರಾಯಭಾರಿಯ ಮುಖಾಂತರ ರಶಿಯದಿಂದಲೂ ಧಾನ್ಯ ದೊರಕಿಸಲು ಪ್ರಯತ್ನಿಸುತ್ತೇವೆ.

ಈಗ ರಾಷ್ಟ್ರದ ಅರ್ಧ ಜನಸಂಖ್ಯೆ ಸೀದಾ ಮೇಲಿದೆ. ಸರಾಸರಿ ಒಬ್ಬನಿಗೆ ೧೦ ಔನ್ಸ್ ಧಾನ್ಯ ಸಿಗುವದು. ಹನ್ನೆರಡು ಔನ್ಸಿನ ಪ್ರಮಾಣದಿಂದಲೇ ಜನರ ಆರೋಗ್ಯ ಕೆಟ್ಟಿರುವದು. ಹಣ್ಣು ಹಂಪಲದಿಂದ ಅದನ್ನು ತಡೆಗಟ್ಟಬೇಕಾಗಿರುವದು. ಗೆಣಸು ಬೆಳೆದು ಕೊರತೆಯನ್ನು ನೀಗಿಸಲು ಜನರು ಪ್ರಯತ್ನಿಸಬೇಕು.

ಇದೇ ಸಪ್ಟಂಬರ ೧೫ ರ ವರೆಗೆ ೧೩೪೧೮೦ ಟನ್ ಧಾನ್ಯವನ್ನು ಪರದೇಶಗಳಿಂದ ತರಿಸಲಾಗಿದೆ. ಇದರಲ್ಲಿ ೩೯೯೮೦೦ ಟನ್ ಗೋದಿ, ೯೦೩೦೦ ಟನ್ ಹಿಟ್ಟು ಮತ್ತು ೩೯೫೦೦೦ ಟನ್ ಅಕ್ಕಿ ಇದೆ. ಉಳಿದ ಭಾಗವು ಇನ್ನಿತರ ಧಾನ್ಯಗಳಿದ್ದು ಇಲ್ಲಿಯ ಜನರಿಗೆ ಅವು ರುಚಿಸದಾಗಿವೆ. ನಮಗೆ ಈ ಅವಧಿಯಲ್ಲಿ ೨೦ ಲಕ್ಷ ಟನ್ ಧಾನ್ಯ ಬರಬೇಕಾಗಿತ್ತು. ಇನ್ನು ಪರದೇಶಗಳನ್ನು ಅವಲಂಬಿಸಿ ಫಲವಿಲ್ಲ. ಈಗ ನಾವು ನಮ್ಮನ್ನೇ ಅವಲಂಬಿಸಬೇಕಾಗಿರುವದು. ಎಲ್ಲ ಲೆಕ್ಕ ಹಾಕಿ ನೋಡಲಾಗಿ ಅಕ್ಟೋಬರ ಕೊನೆಗೆ ನಮ್ಮಲ್ಲಿ ಒಂದು ಲಕ್ಷ ಟನ್ ಧಾನ್ಯ ಮಾತ್ರ ಉಳಿಯುವದು."

ಮೇಲಿನ ಮಾತಿನಿಂದ ಹಿಂದುಸ್ತಾನದ ಆಹಾರ ಪರಿಸ್ಥಿತಿ ಯೆಂತಹ ಬಿಕ್ಕಟ್ಟಿನಲ್ಲಿ ಸಿಕ್ಕಿದೆ ಎಂಬುದು ಸ್ಪಷ್ಟವಾಗುತ್ತಿದೆ. ಬ್ರಹ್ಮದೇಶ, ಫ್ರೆಂಚ್ ಇಂಡೋಚೀನ ಮತ್ತು ಸಯಾಮುಗಳಲ್ಲಿ ಭತ್ತದ ಬೆಳೆ ಕಡಿಮೆಯಾಗಿರುವುದರಿಂದ ನಮಗೆ ಆ ದೇಶಗಳಿಂದ ಬರಬೇಕಾದಷ್ಟು ಆಹಾರ ಧಾನ್ಯ ಬರಲಾರದಾಗಿದೆ. ಇದರಿಂದ ನಮ್ಮ ಸರಕಾರಗಳೂ ಸಾರ್ವಜನಿಕರೂ ಹೆಚ್ಚು ಬೆಳೆ ಬೆಳೆವ ಕಾರ್ಯಕ್ಕೆ ಕೇವಲ ವಾಕ್ಸಹಾಯ ಕೊಡುತ್ತಿರುವುದನ್ನು ಬಿಟ್ಟು ಕ್ರಾಂತಿಕಾರಕ ಪದ್ಧತಿಗಳಿಂದ ಸಾಮೂಹಿಕ ಒಕ್ಕಲುತನ ಮುಂತಾದವನ್ನು ಜಾರಿಗೆ ತಂದು ಅತ್ಯಾಧುನಿಕ ವೈಜ್ಞಾನಿಕ ಸಾಧನ ಸಾಮಗ್ರಿಗಳನ್ನು ತರಿಸಿ, ಬಳಸಿ ಹೆಚ್ಚು ಬೆಳೆ ಬೆಳೆಸಲು ನಮ್ಮ ರೈತರಿಗೆ ನೆರವಾಗಬೇಕೆಂದು ಆಗ್ರಹಪೂರ್ವಕ ಸೂಚಿಸಬಯಸುತ್ತೇವೆ.

## ಕರ್ನಾಟಕ ಪ್ರಾಂತೀಕರಣದ ಮುನ್ನಡೆ

### ತಜ್ಞಸಮಿತಿಯ ವರದಿ

### ಕ್ರಿಯಾಸಮಿತಿಯಲ್ಲಿ ಸ್ವೀಕಾರ

ಕರ್ನಾಟಕ ಸ್ವತಂತ್ರ ಪ್ರಾಂತವಾಗಲು ತಕ್ಕದ್ದಾಗಿದೆಂದು ಪ್ರತಿಪಾದಿಸುವ ಕರಡನ್ನು ಸಿದ್ಧಪಡಿಸುವ ಸಮಿತಿಯ ಸಭೆ ಭಾರತ ಸೇವಕಸಮಾಜ ಸಂಸ್ಥೆಯ ಮುಂಬಯಿ ಕಚೇರಿಯಲ್ಲಿ ೨೯ಕ್ಕೆ ಕೂಡಿತ್ತು. ಶ್ರೀ ದಿವಾಕರ, ವಾಳವೇಕರ, ದಿವಕರ ದೇಸಾಯಿ, ಹುಬ್ಳೀಕರ ಮುಂತಾದವರು ಇವರು ಸಭೆಗೆ ಬಂದಿದ್ದರು. ಸಮಿತಿಯು ಸಿದ್ಧವಾದ ಕರಡನ್ನು ಪರಿಶೀಲಿಸಿ ಅದನ್ನೇ ನಕ್ಷೆ ಮೊದಲಾದ ಪರಿಶಿಷ್ಟಗಳ ಸಹಿತವಾಗಿ ನವಂಬರ ೧೦ ರೊಳಗಾಗಿ ಪರಿಪೂರ್ಣಗೊಳಿಸಬೇಕೆಂದು ನಿರ್ಧರಿಸಲಾಯಿತು.

ದೊಡ್ಡ ಮತ್ತು ಸುಸಮೃದ್ಧ ಸ್ಥಾನಗಳನ್ನು ಬಿಟ್ಟು ಹಿಂದುಸ್ತಾನ ಒಕ್ಕೂಟದಲ್ಲಿಯ ಕನ್ನಡ ಪ್ರದೇಶಗಳಗೊಂಡು ಕರ್ನಾಟಕ ಪ್ರಾಂತವು ಈಗಾಗಲೆ ಸ್ವಯಂಪೂರ್ಣವಿರುವದೆಂದೂ ಒಕ್ಕಲತನ, ಮೀನಗಾರಿಕೆ ಉದ್ಯೋಗ, ಗಣಿ, ಅರಣ್ಯ ಮೊದಲಾದವುಗಳಿಗೆ ಅದರಲ್ಲಿ ಸಾಕಷ್ಟು ಅವಕಾಶವಿರುವದೆಂದೂ ನೀರಾವರಿ ಜಲ ವಿದ್ಯುಚ್ಛಕ್ತಿ ಅಭಿವೃದ್ಧಿ, ಸಂಪರ್ಕ, ಬಂದರಗಳ ಅಭಿವೃದ್ಧಿ ಸುಮಾರು ೬೦ ಕೋಟಿ ರೂಪಾಯಿ ವೆಚ್ಚದಿಂದ ಸಾಧ್ಯವೆಂದೂ ತೋರಿಸಲು ಪ್ರಾಂತದ ಅಂಕೆ ಸಂಖ್ಯೆಗಳನ್ನು ಕೂಡಿಸಬೇಕೆಂದು ಗೊತ್ತಾಯಿತು.

### ಮಹಾಸಮಿತಿಯ ಒಪ್ಪಿಗೆ

ಅಖಿಲ ಕರ್ನಾಟಕ ಏಕೀಕರಣ ಮಹಾಸಭೆಯ ಕ್ರಿಯಾಸಮಿತಿಯ ಸಭೆ ೧ ನೇ ತಾರೀಖು ಪುಣೆಯಲ್ಲಿ ಶ್ರೀ ಬಿ. ಎಂ. ಮುನವಳ್ಳಿಯವರ ಅಧ್ಯಕ್ಷತೆಯಲ್ಲಿ ಸೇರಿದ್ದಿತು. ಶ್ರೀ ರಂಗನಾಥ ದಿವಾಕರ, ಪಣ್ಣುಪ್ಪಾ ಅಂಗಡಿ, ಮಲ್ಲನಗೌಡಾ ಪಾಟೀಲ ಮುಂತಾದ ಪ್ರಮುಖರು ಉಪಸ್ಥಿತರಾಗಿದ್ದರು. ಮುಂಬಯಿ, ಮದ್ರಾಸ ಪ್ರಾಂತಗಳ ಕನ್ನಡ ಜಿಲ್ಹೆಗಳು ಮತ್ತು ಕೊಡಗು ಸೇರಿ ರಚಿತವಾಗುವ ಕರ್ನಾಟಕ ಪ್ರಾಂತವು ಪ್ರತ್ಯೇಕ ಪ್ರಾಂತವಾಗಿ ಸಮೃದ್ಧವಾಗಿ ಬಾಳಬಲ್ಲದು ಎಂಬುದಾಗಿ ತಜ್ಞ ಸಮಿತಿಯು ಸಿದ್ಧಪಡಿಸಿದ ವರದಿಯನ್ನು ಚರ್ಚಿಸಿ ಅದಕ್ಕೆ ಮನ್ನಣೆ ಕೊಡಲಾಯಿತು. ಘಟನಾಸಮಿತಿಯಲ್ಲಿ ಈ ವರದಿಯನ್ನು ಒಪ್ಪಿಸಲು ತಜ್ಞ ಸಮಿತಿಗೆ ಅಧಿಕಾರ ಕೊಡಲಾಯಿತು.

---

## ಸದ್ಯಕ್ಕೆ ರೇಲ್ವೆ ಸಂಪಿನ ವಿಚಾರ ಬೇಡ

### ರೇಲ್ವೆ ಕೆಲಸಗಾರ ಮಹಾಮಂಡಳದ ಗೊತ್ತುವಳಿ

ರೇಲ್ವೆ ಬೋರ್ಡಿನವರು ರೇಲ್ವೆ ಕೆಲಸಗಾರರಿಗೆ ಕೊಡಮಾಡಿದ ಸವಲತ್ತುಗಳನ್ನು ಸ್ವೀಕರಿಸತಕ್ಕದ್ದು, ಹಿಂದುಸ್ತಾನ ಸರಕಾರಕ್ಕೆ ರೇಲ್ವೆ ನೌಕರರು ತಮ್ಮ ಹಾರ್ದಿಕ ಸಹಕಾರ ನೀಡತಕ್ಕದ್ದು. ಸಂಪು ಹೂಡುವ ವಿಚಾರವನ್ನು ಬಿಟ್ಟುಗೊಡತಕ್ಕದ್ದು ಎಂಬುದಾಗಿ ಅಖಿಲ ಭಾರತ ರೇಲ್ವೆ ಕೆಲಸಗಾರ ಮಹಾಮಂಡಳದ ಕಾರ್ಯಕಾರೀ ಸಮಿತಿಯ ೧ ನೇ ತಾರೀಖಿನ ಸಭೆಯಲ್ಲಿ ನಿರ್ಣಯಿಸಲಾಯಿತು. ಎರಡನೆ ಗೊತ್ತುವಳಿಯಲ್ಲಿ ಮೈಸೂರು ರೇಲ್ವೆ ಕೆಲಸಗಾರರ ಸಂಪಿಗೆ ಬೆಂಬಲಕೊಡುವ, ಮೈಸೂರ ರೇಲ್ವೆ ಕೆಲಸಗಾರರಿಗೆ ಸೀದಾ ನಿಲ್ಲಿಸಿದ್ದಕ್ಕಾಗಿ ಸರಕಾರವನ್ನು ನಿಷೇಧಿಸುವ, ಮೈಸೂರ ಸರಕಾರಕ್ಕೆ ಹೋಗುವ ಯಾವದೇ ಸರಕನ್ನು ರೇಲ್ವೆಯಲ್ಲಿ ಹಾಕಲು ನಿರಾಕರಿಸಲು ಘಟರೇಲ್ವೆ ನವರು ಎಲ್ಲ ರೇಲ್ವೆ ಕೆಲಸಗಾರರಿಗೆ ಅಪ್ಪಣೆ ವಿಧಿಸಬೇಕಾಗುವದೆಂದು ಮೈಸೂರ ಸರಕಾರಕ್ಕೆ ಎಚ್ಚರಿಕೆ ಕೊಡುವ ಗೊತ್ತುವಳಿಯು ಸ್ವೀಕೃತವಾಯಿತು.

---

## ದಿಲ್ಲಿಯ ಬಾನುಲಿಯಲ್ಲಿ ಕನ್ನಡ

ದಿಲ್ಲಿಯಿಂದ ದಿನವೂ ಸಂಜೆ ೫-೪೫ ರಿಂದ ೬ ಗಂಟೆಯ ವರೆಗೆ ೨೫.೩೨ ಮತ್ತು ೪೧. ೦ ೭ ಮೀಟರ ಬ್ಯಾಂಡಗಳ ಮೇಲೆ ಕನ್ನಡ ಭಾಷೆಯಲ್ಲಿ ಸುದ್ದಿಗಳನ್ನು ಬಿತ್ತರಿಸುವ ಕಾರ್ಯಕ್ರಮ ಅಕ್ಟೋಬರ ೧ ರಿಂದ ಪ್ರಾರಂಭವಾಗಿದೆ. ಬಹಳ ದಿನಗಳ ನಂತರವಾದರೂ ಕನ್ನಡದ ಕೂಗು ಅಲ್ಲಿಯವರೆಗೆ ಮುಟ್ಟಿದ್ದಕ್ಕೆ ಇದೊಂದು ನಿದರ್ಶನ. ಲಭ್ಯವಿಲ್ಲ. ಕನ್ನಡಿಗರು ಇನ್ನು ಈ ವಿಶಾಲ ಬಳಗವಿಯಾ ಸಮುಪಯೋಗ ಪಡೆಯುವರೆಂದು ಆಶಿಸೋಣ.

ಗ. ಸೇ. ಕುಲಕರ್ಣಿ

# ಮೈ ಸೂ ರಿ ನ ಕ ದ ನ ಕಾಂ ಡ

ಕೋಲಾರದ ಎರಡು ಚಿನ್ನದ ಗಣಿಗಳ ಕೆಲಸಗಾರರು ಮೂರು ದಿನಗಳಿಂದ ಸಂಪು ಹೂಡಿರುವುದರಿಂದ ಪರಿಸ್ಥಿತಿಯು ಗಂಭೀರವಾಗಿರುವುದು. ಕಳೆದ ೨೪ ರಲ್ಲಿ ಈ ಗಣಿಗಳ ಕೂಲಿಕಾರರ ಮೇಲೆ ನಡೆದ ಗೋಲೀಬಾರಿನಲ್ಲಿ ಒಬ್ಬ ಸತ್ತನೆಂದೂ ಹಲವರಿಗೆ ಗಾಯಗಳಾಗಿವೆಯೆಂದೂ ತಿಳಿದು ಬಂದಿದೆ. ಕೋಲಾರ ಜಿಲ್ಹಾ ಮ್ಯಾಜಿಸ್ಟ್ರೇಟರು ಅಲ್ಲಿ ೪೮ ತಾಸುಗಳ ಕರ್ಫ್ಯೂ ಜಾರಿ ಮಾಡಿದರು.

ಮದ್ರಾಸ ಮೇಲ ಗಾಡಿಯಿಂದ ಕಳೆದ ೨೫ ರಲ್ಲಿ ಬೆಂಗಳೂರಿಗೆ ಹೋದ "ಸಂಯುಕ್ತ ಕರ್ನಾಟಕ"ದ ಪ್ರತಿಗಳನ್ನು ಪೋಲೀಸರು ದಂಡಿನ ಶಿಬ್ಬಾಣದಲ್ಲಿ ಜಪ್ತಿ ಮಾಡಿದರು.

ಹೊಳೆನರಸೀಪುರದಲ್ಲಿ ಪೋಲೀಸರು ಒಂದು ಮೆರವಣಿಗೆಯನ್ನು ತಡೆದು ಹಿಂದುಸ್ತಾನದ ಧ್ವಜವನ್ನು ಕಿತ್ತುಕೊಂಡು ಮೆರವಣಿಗೆಗಾರರ ಮೇಲೆ ಲಾಠಿ ಪ್ರಹಾರ ಮಾಡಿದರು. ಆಗ ರೊಚ್ಚಿಗೆದ್ದು ಕೆಲವರು ಕಲ್ಲು ತೂರಲು ಗೋಳೀಬಾರು ಮಾಡಲಾಯಿತು. ಅದರಿಂದ ೨-೩ ಜನರು ಗಾಯಗೊಂಡರು. ಅನಂತರ ಹೊಳೆನರಸೀಪುರಕ್ಕೆ ಸೈನ್ಯ ಸಾಗಿತು. ಜನರ ಗದ್ದಲದಲ್ಲಿ ದಫೇದಾರನೊಬ್ಬನು ಪೆಟ್ಟಿನಿಂದ ಗಾಯಗೊಂಡನೆಂದು ತಿಳಿಯುತ್ತದೆ.

ಧಾರವಾಡದ ತಾಲೂಕು ಕಾಂಗ್ರೆಸ ಕಮಿಟಿಯವರು ಕಳೆದ ೨೫ ರಲ್ಲಿ ಸತ್ಯಾಗ್ರಹಿಗಳ ತಂಡವೊಂದನ್ನು ಮೈಸೂರಿಗೆ ಕಳುಹಿದರು.

ಬಾಣಾವರದ ಸತ್ಯಾಗ್ರಹಿಗಳು ಅಲ್ಲಿಯ ಪೋಲೀಸು ಕಚೇರಿಯ ಮೇಲೆ ರಾಷ್ಟ್ರಧ್ವಜ ಏರಿಸಿದರು.

ನುಗ್ಗೆಹಳ್ಳಿಯ ಪೋಲೀಸು ಠಾಣೆಯ ಮೇಲೆ ಕೆಲವರು ದಾಳಿ ಮಾಡಿ ಶಸ್ತ್ರಗಳನ್ನು ಅಪಹರಿಸಿಕೊಂಡು ಹೋದರು;

ಮೈಸೂರ ಸರಕಾರದ ದಬ್ಬಾಳಿಕೆಯ ಘೋರ ಅದ ನಿಷೇಧಾರ್ಥ ಹಾಸನಕ್ಕೆ ಸೇರಿದ ಅರಕಲಗೂಡು ತಾಲೂಕಿನ ಎಲ್ಲ ಪಟೇಲ ಶಾನುಭೋಗರೂ ಸಂಪು ಹೂಡುವರು.

ತೀರ್ಥಹಳ್ಳಿಯಲ್ಲಿ ಅವಿರತವಾಗಿ ಧ್ವಜ ಸತ್ಯಾಗ್ರಹ ಸಾಗಿದೆ. ಆ ಸಂಬಂಧ ಅನೇಕರು ಬಂಧಿತರಾದರು.

ಕೊಪ್ಪ ತಾಲೂಕ ಕಚೇರಿಯಮುಂದೆ ಯಶಸ್ವಿ ಪಿಕೆಟಿಂಗ ನಡೆದಿದ್ದು ಸ್ವಯಂಸೇವಕರು ಒಳಗೆ ಯಾರನ್ನೂ ಬಿಡಲಿಲ್ಲ. ಆವರು ತರಿಕೆರೆಯ ಮೊದಲನೆಯ ವರ್ಗದ ಮ್ಯಾಜಿಸ್ಟ್ರೇಟರ ಕೋರ್ಟಿಗೆ ಬೀಗ ಹಾಕಿ ಮ್ಯಾಜಿಸ್ಟ್ರೇಟರನ್ನು ಕೂಡ ಒಳಗೆ ಬಿಡಲಿಲ್ಲ.

ಶಿವಮೊಗ್ಗದಿಂದ ೪೩ ರಾಜಕೀಯ ಕೈದಿಗಳನ್ನು ಬೆಂಗಳೂರಿಗೆ ಸ್ಥಳಾಂತರಿಸಲಾಗಿದೆ. ಸಂಸ್ಥಾನದ ಎಲ್ಲ ಸೆರೆಮನೆಗಳೂ ತುಂಬಿದ್ದರಿಂದ ರಾಜಬಂಧಿಗಳನ್ನು ಅಲ್ಲಿಂದಲ್ಲಿಗೆ ಸ್ಥಳಹುಡುಕುತ್ತ ಸಾಗಿಸುತ್ತಿದ್ದಾರೆ.

### ಶ್ರೀ ಗೋರೂರರ ಮೇಲೆ ಅನ್ಯಾಯ

ಪ್ರಸಿದ್ಧ ಕನ್ನಡ ಬರಹಗಾರರಾದ ಶ್ರೀ ಗೋರೂರು ರಾಮಸ್ವಾಮಿಯವರು ತುಮಕೂರ ಗೋಳೀಬಾರಿನಲ್ಲಿ ಸತ್ತ ತಮ್ಮ ಮಗನ ಉತ್ತರಕ್ರಿಯೆಗಾಗಿ ಪೆರೋಲ ಮೇಲೆ ತಮ್ಮನ್ನು ಬಿಡಬೇಕೆಂದು ಅರ್ಜಿಮಾಡಿದರೆ ಅಧಿಕಾರಿಗಳು ಅವರಿಂದ ಸಾವಿರರೂಪಾಯಿ ಜಾಮೀನು ಕೇಳಿದರು. ಶ್ರೀ ಗೋರೂರರು ಅದಕೊಪ್ಪಲಿಲ್ಲವೆಂದೂ ಸರಕಾರದ ಈ ಧೋರಣದಿಂದ ಜನ ಮತ್ತಷ್ಟು ಕ್ಷುಬ್ಧವಾಗಿದೆಯೆಂದೂ ತಿಳಿಯುತ್ತವೆ.

ಹಾಸನದ ವಿದ್ಯಾರ್ಥಿಗಳೂ ಸ್ತ್ರೀಯರೂ ಆಪ್ಪಣೆಮುರಿದು ಪ್ರಭಾತಫೇರಿ ಹೊರಡಿಸಿದಾಗ ಅವರ ಮೇಲೆ ಲಾಠಿಪ್ರಹಾರಮಾಡಿ ೪ ಜನರನ್ನು ಬಂಧಿಸಿದರು.

ಕಳೆದ ತಾ ೧೮ ರಂದು ಭದ್ರಾವತಿಯ ಸತ್ಯಾಗ್ರಹಿಗಳು ಕಬ್ಬಿಣದ ಕಾರಖಾನೆಯ ಮೇಲೆ ರಾಷ್ಟ್ರಧ್ವಜವನ್ನೇರಿಸಿ ತಿರುಗಿಬರುತ್ತಿದ್ದಾಗ ಪೋಲೀಸರು ಲಾಠಿ ಹಲ್ಲೆ ಮಾಡಿ, ಗೋಳೀಬಾರು ಮಾಡಿ ಗೊಂದಲವೆಬ್ಬಿಸಿದರು. ಅದರಿಂದ ೪ ಜನರು ಗಾಯಗೊಂಡರು. ಅವರನ್ನು ಆಸ್ಪತ್ರೆಗೊಯ್ಯಲಾಯಿತು.

ಹರಿಹರ ತಾಲೂಕ ಮಳೆ ಬೆನ್ನೂರು ಪೋಲೀಸ ಠಾಣೆಗಳಿಂದ ಬಂದೂಕುಗಳೂ ಸಮುವಸ್ತ್ರಗಳೂ ದಿಷ್ಟ್ ಗಳೂ ಮಾಯವಾದವು.

ಶಿವಮೊಗ್ಗದಲ್ಲಿ ಶ್ರೀ ಹಾಲಪ್ಪನವರ ಅಧ್ಯಕ್ಷತೆಯಲ್ಲಿ ಪ್ರಚಂಡ ಸಾರ್ವಜನಿಕ ಸಭೆಸೇರಿ ಮೈ... ಪೋಲೀಸರ ಗೋಳೀಬಾರಿನ ವಿಚಾರಣೆಯನ್ನು ...ರದಲ್ಲಿ ನಡೆಸಬೇಕೆಂಬ ಗೊತ್ತುವಳಿ ಕಮ... ಕೋಟೆಯ... ತಾಲೂಕಿನ ಹಳ್ಳಿಯಲ್ಲಿ ಪುಂಡರು ಮುತ್ತಿ... ಅದರಲ್ಲಿದ್ದ ಪರ ಹಣದೋಚಿ...

### ಮುಸ್ಲಿಂ ಲೀಗಿನ ಸಂಧಾನ ಪ್ರಯತ್ನ

ಮೈಸುರು ಶಾಸನ ಸಭೆಯ ಮುಸ್ಲಿಂಲೀಗ್ ಪಕ್ಷದ ಧುರೀಣರೂ ಬೆಂಗಳೂರು ನಗರ ಸಭೆಯ ಅಧ್ಯಕ್ಷರೂ ಆದ ಶ್ರೀ. ಏ. ಜಿ. ಖಲೀಲರು ಜೇಲಿಗೆ ಹೋಗಿ ಮೈ. ಕಾಂ. ಅಧ್ಯಕ್ಷರಾದ ಶ್ರೀ. ಚೆಂಗಲರಾಯರೆಡ್ಡಿಯವರನ್ನು ಕಂಡು ಸಂಧಾನದ ಬಗ್ಗೆ ಚರ್ಚೆ ನಡೆಸಿದರು. ಶ್ರೀ. ಖಲೀಲರು ಹೊರಡಿಸಿದ ಪ್ರಕಟನೆಯಲ್ಲಿ ಮೈಸೂರು ಸರಕಾರದವರು ಮೈ. ಕಾಂ. ಕಾರ್ಯಸಮಿತಿಯ ಸದಸ್ಯರನ್ನು ಕೂಡಲೇ ಬಂಧಮುಕ್ತಮಾಡಬೇಕೆಂದು ಹೇಳಿದ್ದಾರೆ.

ಕಳೆದ ೨೭ ರಲ್ಲಿ ಹರಿಹರದ ಸ್ತ್ರೀಯರು ವಿರಕ್ತ ಮಠದಲ್ಲಿ ಸಭೆ ಸೇರಿ ಸರಕಾರದ ದಬ್ಬಾಳಿಕೆ ಖಂಡಿಸಲು ಪ್ರತಿಬಂಧಕಾಜ್ಞೆಯನ್ನುಲ್ಲಂಘಿಸಿ ಪ್ರಭಾತ ಫೇರಿ, ಮೆರವಣಿಗೆ, ಬಹಿರಂಗ ಸಭೆಗಳನ್ನು ನಡೆಸಿದರು.

ಮೈಸೂರು ರೇಲ್ವೆ ಕೆಲಸಗಾರರ ಸಂಪು ಹಿಂತೆಗೆದುಕೊಳ್ಳಲು ಕೆಲಸಗಾರರು ಒಪ್ಪದ್ದರಿಂದ ಸಂಪು ಹಾಗೇ ಮುಂಬರಿದಿದೆ. ರೇಲ್ವೆ ಕೆಲಸಗಾರರ ಮುಖಂಡರಾದ ಶ್ರೀ ಎಚ್. ಟಿ. ರಾಘವ ರಾಜಾ ಮತ್ತು ಇತರರನ್ನು ಸರಕಾರದವರು ಪುನಃ ಬಂಧಿಸಿ ಸೆರೆಮನೆಗೆ ಕಳುಹಿಸಿದರು.

ಮೈಸೂರ ಕಾಂಗ್ರೆಸ್ ಮುಖಂಡರನ್ನು ಬಿಡುಗಡೆ ಮಾಡಲಿದ್ದಾರೆಂದು ಹಬ್ಬಿದಸುದ್ದಿ ನಿಜವಲ್ಲೆಂದು ವಿಶ್ವಸನೀಯವಾಗಿ ತಿಳಿದುಬಂದಿದೆ.

ಸತ್ಯಾಗ್ರಹದಲ್ಲಿ ಭಾಗವಹಿಸಲು ಮಂಗಳೂರಿನ ವಿದ್ಯಾರ್ಥಿಗಳು ಹಾಸನಕ್ಕೆ ಹೋದರು.

ಕಳೆದ ೨೭ ರಲ್ಲಿ ಸಾಗರದ ಸತ್ಯಾಗ್ರಹಿಗಳನ್ನು ಪೋಲಿಸರು ಮಧ್ಯರಾತ್ರಿಯಲ್ಲಿ ಕಾಡುಪಾಲು ಮಾಡಿ ಬಂದರೆಂದು ತಿಳಿಯುತ್ತದೆ.

ಚಿತ್ರದುರ್ಗದ ಸತ್ಯಾಗ್ರಹಿಗಳು ತಾಲೂಕ ಕಚೇರಿಯ ಮೇಲೆ ರಾಷ್ಟ್ರಧ್ವಜ ಹಾರಿಸಲು ಪ್ರಯತ್ನಿಸಿದರು. ಪೋಲೀಸರು ಅವರನ್ನು ಬಂಧಿಸಿದರು. ಸುಮಾರು ೫೦೦೦ ಕ್ಕಿಂತ ಹೆಚ್ಚು ಜನರು ತಾಲೂಕ ಕಚೇರಿಯ ಮುಂದೆ ನೆರೆದು ಪಿಕೆಟಿಂಗ ನಡೆಸುವದನ್ನೂ ರಾಷ್ಟ್ರಧ್ವಜ ಹಾರಿಸುವದನ್ನು ನೋಡಲು ನೆರೆದಿದ್ದರು. ಅಮಲದಾರರು ಈ ಜನರಿಗೆ ಚದುರಲು ಹೇಳಿದರೂ ಅವರು ಸ್ಥಳ ಬಿಟ್ಟು ಕದಲಲಿಲ್ಲ. ಸತ್ಯಾಗ್ರಹಿಗಳನ್ನು ಬಂಧಿಸಿದಂತೆ ಎಲ್ಲ ಜನರನ್ನು ಬಂಧಿಸಿರೆಂದು ಜನರು ಕೂಗಾಟವೆಬ್ಬಿಸಿದರು. ಅಷ್ಟರಲ್ಲಿ ಪೋಲೀಸರು ಬಂದವರೇ ಮುಂಜಾಗ್ರತೆ ಸೂಚನೆ ಸಹ ಕೊಡದೆ ಮನಬಂದಂತೆ ಗುಂಡು ಹಾರಿಸ ಹತ್ತಿದರು. ದೂರ ನೆರಳಿನಲ್ಲಿ ನಿಂತ ಜನರ ಮೇಲೆ ಸಹ ಪೋಲೀಸರು ಗುಂಡು ಹಾರಿಸಿದ್ದಾಗಿ ತಿಳಿಯುತ್ತದೆ.

### ಕೋರ್ಟುಗಳ ಪಿಕೆಟಿಂಗ

ಬೆಂಗಳೂರು ಕೋರ್ಟುಗಳ ಮುಂದೆ ಪಿಕೆಟಿಂಗ ನಡೆಸಿದ ೨೦ ಸ್ತ್ರೀ ಸತ್ಯಾಗ್ರಹಿಗಳನ್ನೂ ಕೆಲವು ವಿದ್ಯಾರ್ಥಿಗಳನ್ನೂ ಪೋಲೀಸರು ಬಂಧಿಸಿದರು. ಕೂಡಲೆ ೮ ಸತ್ಯಾಗ್ರಹಿಗಳ ತಂಡವು ಬಂದು ವಕೀಲ ಸಂಘದ ಮುಂದೆ "ನೀವು ನ್ಯಾಯಾಲಯಗಳಿಗೆ ಬಹಿಷ್ಕಾರ ಹಾಕಿರಿ ಎಂದು ಉಪವಾಸ ಪ್ರಾರಂಭಿಸಿ ಸತ್ಯಾಗ್ರಹ ಹೂಡಿದ್ದಾರೆ. ಇಲ್ಲಿಂದ ೧೮ ಮೈಲು ಇರುವ ಹೊಸಕೋಟೆ ತಾಲೂಕ ಕಚೇರಿಯ ಮುಂದೆ ಪಿಕೆಟಿಂಗ ಪ್ರಾರಂಭಿಸಲಾಗಿದೆ. ೪೭ ಸತ್ಯಾಗ್ರಹಿಗಳನ್ನು ಪೋಲೀಸರು ಸೆರೆಹಿಡಿದು ಇಲ್ಲಿಗೆ ತಂದರು. ಇಲ್ಲಿಯ ಜೇಲಿನಲ್ಲಿ ಸ್ಥಳವಿಲ್ಲದ್ದರಿಂದ ಕೃಷ್ಣರಾಯಪೂರ ಸ್ಥಾನಬದ್ಧ ಶಿಬಿರಕ್ಕೆ ಅವರನ್ನು ಸಾಗಿಸಲಾಯಿತು.

### ರೇಲ್ವೆ ಸಂಪುಗಾರರಿಗೆ ಸಹಾನುಭೂತಿ

ಮೈಸೂರ ಸತ್ಯಾಗ್ರಹ ಕ್ರಿಯಾ ಸಮಿತಿಯ ಸದಸ್ಯರಾದ ಶ್ರೀ. ಎಚ್. ಎಸ್. ರುದ್ರಪ್ಪನವರು ಒಂದು ಪ್ರಕಟನೆ ಹೊರಡಿಸಿ ಮೈಸೂರು ಸರಕಾರದವರು ಸಂಪು ಹೂಡಿದ ರೇಲ್ವೆ ಕೆಲಸಗಾರರಿಗೆ ಆಹಾರ ಸೀದಾ ಕೊಡುವದನ್ನು ಬಂದು ಮಾಡಿದ್ದನ್ನೂ ಅವರ ಕುಟುಂಬದ ಜನರನ್ನು ಒತ್ತಾಯದಿಂದ ರೇಲ್ವೆ ಚಾಳದಿಂದ ಹೊರದೂಡುತ್ತಿರುವದನ್ನೂ ಖಂಡಿಸಿ ಇಂಥ ಕೃತ್ಯಗಳು ನಾಗರಿಕ ಸರಕಾರಕ್ಕೆ ಸಲ್ಲಲಾರವೆಂದೂ ಇದರಿಂದ ಪರಿಸ್ಥಿತಿ ಮತ್ತಿಷ್ಟು ಹದಗೆಡುವದೆಂದೂ ಹೇಳಿ ರೇಲ್ವೆ ಕೆಲಸಗಾರರು ಇದರಿಂದ ಧೈರ್ಯಗುಂದದೆ ತಮ್ಮ ಗುರಿ ಸಾಧಿಸಲು ಸಂಪು ಮುಂಬರಿಸಬೇಕೆಂದೂ ಹೇಳಿದರು.

ಹಾಸನದಲ್ಲಿ ವಸಂತ ಕ್ಯಾಫೆ ಎದುರಿನಲ್ಲಿ ಆಕಾಶವಾಣಿ ಮೂಲಕ ಸುದ್ದಿ ಕೇಳಲು ಜನರು ನೆರೆದಾಗ ರಿಝರ್ವ ಪೋಲೀಸರು ಬಂದು ಜನರ ಮೇಲೆ ಲಾಠಿ ಏಟು ಹಾಕಹತ್ತಿದರು. ಜನರು ಭಯಭೀತರಾಗಿ ಕ್ಯಾಫೆಯಲ್ಲಿ ಓಡಿ ಹೋಗಿ ಸೇರಿಕೊಂಡರು. ಪೋಲೀಸರು ಬೆನ್ನಟ್ಟಿ ಕ್ಯಾಫೆಯಲ್ಲಿ ಪ್ರವೇಶಿಸಿ ಕೈಗೆ ಸಿಕ್ಕವರ ಮೇಲೆ ಲಾಠಿ ಏಟು ಕೊಟ್ಟರು. ಕ್ಯಾಫೆಯ ಶ್ರೀ. ಭಾಸ್ಕರನ್ ಎಂಬ ಖಜೀನದಾರನ ತಲೆಗೆ ಬಲವಾದ ಲಾಠಿ ಏಟುಬಿತ್ತು ಅವನ ತಲೆಯಿಂದ ರಕ್ತ ಹರಿಯುತ್ತಿರಲು ಪೋಲೀಸರು ಹಣದ ಪೆಟ್ಟಿಗೆಯಲ್ಲಿದ್ದ ೪೦೦ ರೂ. ದೋಚಿಕೊಂಡು ಹೋದರು. ಇನ್ನೊಂದು ರಿಝರ್ವ ಪೋಲೀಸ ಪಡೆಯು ಔಷಧ ಅಂಗಡಿಯಲ್ಲಿ ಹೊಕ್ಕಿತು. ಅದರ ಒಡೆಯರಾದ ಶ್ರೀನಿವಾಸ ಅಯಂಗಾರರು ಪ್ರತಿಭಟಿಸಿದರೂ ಕೇಳದೆ ಅವರನ್ನು ಹೆದರಿಸಿ ಪೋಲೀಸರು ಹಣದ ಪೆಟ್ಟಿಗೆ ಒಡೆಯಲು ಪ್ರಯತ್ನಿಸಿದರು. ಆದರೆ ಯಶ ದೊರೆಯಲಿಲ್ಲವೆಂದು ತಿಳಿಯುತ್ತದೆ.

# ವ್ಯಾಪಾರ ಪ್ರಪಂಚ

### ಮುಂಬಯಿ ಶೇರಪೇಟೆ

ಮುಂಬಯಿ ೧— ಸ್ಟೀಲ ಧಾರಣೆಯಲ್ಲಿ ಹೆಚ್ಚಳವಾಗಬಹುದೆಂಬ ಸುದ್ದಿ ಹಬ್ಬಿದ್ದರಿಂದ ಮತ್ತು ಜಾಮಶೆದಪುರದಲ್ಲಿ ಕೂಲಿಕಾರ ಪರಿಸ್ಥಿತಿ ಸುಧಾರಿಸಿದ ವರದಿ ಬಂದದ್ದರಿಂದ ವ್ಯಾಪಾರವು ಉತ್ತರದಿಂದ ಸಾಗಿತಷ್ಟೇ ಅಲ್ಲದೆ ಮುಂದಿನ ವಾಯಿದೆ ವ್ಯವಹಾರವೂ ನಡೆಯಿತು. ಸ್ಟೀಲ ವ್ಯವಹಾರದಂತೆ ಶೇರಪೇಟೆಯೂ ಬಹಳ ಮಟ್ಟಿಗೆ ಏರಿಕೆಯಲ್ಲಿದ್ದಿತು,

ಜವಳಿ ಗಿರಣಿಗಳ ಸಂಪು ಬೇಗ ನಿಲ್ಲುವದೆಂಬ ಭರವಸೆ ಹುಟ್ಟಿದ್ದರಿಂದ ಮತ್ತು ಜವಳಿ ಅಭಿವೃದ್ಧಿಯೂ ಆಗುವ ಅನುಕೂಲತೆ ಕಂಡು ಬಂದದ್ದರಿಂದ ಜವಳಿ ಮಾರಾಟವೂ ಉತ್ತರದಿಂದ ನಡೆಯಿತು. ಉಳಿದ ವೇಟಿಗಳಲ್ಲಿಯ ವಿಶೇಷತಃ ಶಿಂದ್ಯಾ ಮತ್ತು ಸಿಮೆಂಟ ವ್ಯವಹಾರದಲ್ಲಿ ಚಟುವಟಿಕೆ ಹೆಚ್ಚಾಗಿ ಕಂಡು ಬಂದಿತು. ಬ್ಯಾಂಕುಗಳಿಗೂ ಒಳ್ಳೆ ಬೆಂಬಲ ಸಿಕ್ಕಿತು. ಸೆಕ್ಯುರಿಟಿಗಳಿಗೆ ಮಾತ್ರ ಅಷ್ಟೊಂದು ಸ್ಥಿರವಾದ ಬೆಂಬಲ ಸಿಕ್ಕದಿದ್ದುದರಿಂದ ಅವು ಇದ್ದ ಸ್ಥಿತಿಯಲ್ಲಿಯೆ ಉಳಿದವು. ಇಂದಿನ ಧಾರಣೆ ಇಂತಿದ್ದವು. — ಬಾಂಬೆ ಡಾಯಿಂಗ ೧೧೩೭-೮-೦ ಸೆಂಟ್ರಲ್ ಇಂಡಿಯಾ ೩೧೨ ಸೆಂಚುರಿ ೯೮೨.೮.೦ ಗೋಕಾಕ ೩೪೪-೦.೦ ಕೊಹಿನೂರ ೫೯೨-೦-೦ ಫೋನಿಕ್ಸ ೧೩೦೫, ಸೊಲ್ಲಾಪುರ ೬೦೪೦ ಸಿಂಪ್ಲೆಕ್ಸ ೨೫೦ ಸ್ವದೇಶಿ ೬೨೧ ವಿಷ್ಣು ೬೫೬.

ಬೇಲಾಪುರ ಸಕ್ಕರೆ ೨೭೫ ಬಾಂಬೆಸ್ಟೀಮ ೫೫೭-೮-೦ ಸಿಂಧ್ಯಾ ಸ್ಟೀಮ ೩೪—೦—೦ ಬಾಂಬೆ ಟ್ರಾಮವೇಜ ೧೨೮-೪-೦ ಟಾಟಾಪಾವರ ೧೭೫೨—೮—೦ ಟಾಟಾಹೈಡ್ರೊ ೧೭೬, ಟಾಟಾಸ್ಟೀಲಡೆಫರ್ಡ ೧೮೨೦ ಟಾಟಾ ಸ್ಟೀಲ ಆರ್ಡಿನರಿ ೩೬೬ ಇಂಡಿಯನ್ ಆಯರ್ನ ೩೫-೬-೦ ಅಸೋಸಿಯೇಟೆಡ್ ಸಿಮೆಂಟ್ಸ ೧೭೦-೦-೦ ಸೆಂಟ್ರಲ್ ಬ್ಯಾಂಕು ೮೯, ಇಂಪೀರಿಯಲ್ (ಅಂಶ ಸಂಚಿತ) ೫೫೬-೪-೦ ಇಂಪೀರಿಯಲ್ (ಪೂರ್ಣಸಂಚಿತ) ೨೨೪೦-೦-೦ ರಿಝರ್ವ ಬ್ಯಾಂಕ ೧೧೬-೦.೦ ೨॥·/. (೧೯೪೮-೫೨) ಸಾಲಪತ್ರ ೧೦೧-೪-೦ ೩·/· (೧೯೪೬) ೧೦೧—೩—೬ ೪·/· ೧೯೬೦—೭೦ ೧೧೪—೦—೦ ೧॥·/· (೧೯೫೫-೬೦) ೧೧೪-೪-೦

### ಚಿನ್ನ-ಬೆಳ್ಳಿ

ತಯಾರಿಬೆಳ್ಳಿಯ ಧಾರಣೆ ೧೬೪-೪-೦ ಇದ್ದರೆ ವಾಯದೆ ವ್ಯವಹಾರ ೧೬೩—೧೨—೦ ಇದ್ದಿತು. ಬಂಗಾರ ತಯಾರಿ ೧೦೯-೦-೦ ವಾಯಿದೆ ೧೦೯-೨-೦

### ಅರಳೆ

ಮುಂಬಯಿ ಅರಳಿಪೇಟೆ ಪ್ರಾರಂಭದಲ್ಲಿ ಸ್ಥಿರ ಮತ್ತು ಏರಿಕೆಯಲ್ಲಿದ್ದಿತು ಆದರೆ ಮುಂದೆ ಲಾಭದ ಕಡೆಗೆ ಮನಸೆಳೆದದ್ದರಿಂದ ಪೇಟೆಯಲ್ಲಿ ಮೊದಲಿನ ಬಿಗುವು ಕಡಿಮೆಯಾಯಿತು. ಪೇಟಿ ಮುಚ್ಚುವಾಗ ಸ್ಥಿರವಿದ್ದಿತು. ಇಂದಿನ ಧಾರಣಿ ೪೬೯—೪೭೩—೪—೦ ವರೆಗೆ ಇದ್ದಿತು. ಹೆಚ್ಚೆಂದರೆ ೪೭೧-೪-೦ ಯಿಂದ ೪೭೧—೮—೦ ವರೆಗೆ ಕಡಮೆಯೆಂದರೆ ೪೬೮—೧೪—೦ ಯಿಂದ ೪೬೯ ರ ವರೆಗಿದ್ದಿತು.

### ಎಣ್ಣೆ ಕಾಳು

ಶೆಂಗಾ ೧೫೫ ಹೊಸಬೆಳೆ ೧೩೭-೧..೦ ಅಗಸಿ ೩೧-೦—೦ ಅಗಸಿಎಣ್ಣೆ ೧೮-೧೨—೦

### ಸಾಂಗಲಿ ಪೇಟೆ

| | |
|---|---|
| ಅರಿಷಣ ಹೇರು | ೧೦೦-೧೧೦ |
| ಮೆಣಸಿನಕಾಯಿ ಹೇರು | ೮೦-೧೦೦ |
| ಶೇಂಗಾ ಖಂಡಿ | ೧೨೮ |

### ಹುಬ್ಬಳ್ಳಿ

| | | |
|---|---|---|
| ಹೊಸ ಜಯವಂತ ಹತ್ತಿ ನಂ. | ೧ | ೨೮೦-೨೮೫ |
| ,, | ೨ | ೨೬೫-೨೭೫ |
| ,, | ೩ | ೨೪೫-೨೬೦ |
| ಹಳೇ ಜಯವಂತ ಹತ್ತಿ | | ೨೯೫-೩೦೦ |
| ಜಿನ ಹೊಸದು | | ೧೮೦-೧೯೦ |
| ಜಿನ ಹಳೇದು | | ೨೦೦-೨೦೫ |
| ಡಬಲರೋಲ | | ೧೮೦-೧೯೦ |
| ಸಾಜಿನ | | ೧೮೫-೧೯೦ |
| ಅಸಲಂಡ ಹತ್ತಿ | | ೨೮೫-೨೯೦ |

# ದಕ್ಷಿಣ ಕನ್ನಡ

ಕಳೆದ ತಾ. ೨೪ ರಲ್ಲಿ ಉಡುಪಿಯ ಕೆನರಾ ಇಂಡಸ್ಟ್ರಿಯಲ್ ಮತ್ತು ಬ್ಯಾಂಕಿಂಗ ಸಿಂಡಿಕೇಟ್ ಎಂಬುದರ ಶಾಖೆಯೊಂದನ್ನು ಪುತ್ತೂರಿನಲ್ಲಿ ತೆರೆಯಲಾಯಿತು.

ಕಳೆದ ತಿಂಗಳ ೧೪ ರಲ್ಲಿ ಕಾರ್ಕಳ ತಾಲೂಕಿನ ಹೊಸ್ಮಾರು ಎಂಬಲ್ಲಿ ತಾಲೂಕು ಬಿಲ್ಲವ ಸಂಘದ ಕಾರ್ಯದರ್ಶಿ ಶ್ರೀ ಕೆ. ಶ್ರೀಧರ ಸುವರ್ಣರವರ ಅಧ್ಯಕ್ಷತೆಯಲ್ಲಿ ಸಭೆಸೇರಿ ತಾಲೂಕು ಸಂಘದ ಶಾಖೆಯೊಂದು ತೆರೆಯಲ್ಪಟ್ಟಿತು

ಶಿರೂರಲ್ಲಿ ಸುಳ್ಳು ಅರ್ಜಿಯ ಪಿಡುಗು ಹೆಚ್ಚುತ್ತಿರುವುದಕ್ಕೆ ಅಧಿಕಾರಿಗಳು ತನಿಖೆ ನಡೆಸಿ ಮೇಲಧಿಕಾರಿಗಳಿಗೆ ತಿಳಿಸಿರುವರು.

ಮೂಡುಬಿದರೆಯ ಶ್ರೀ ಸರಸ್ವತಿ ಸೇವಾ ಸಂಘದ ಆಶ್ರಯದಲ್ಲಿ ಸಾರ್ವಜನಿಕರ ಸಭೆಯೊಂದು ಕಳೆದ ೧೮ ರಲ್ಲಿ ಸೇರಿ ದಸರ ಕಾರ್‍ಯಕ್ರಮವನ್ನು ವಿಜೃಂಭಣೆಯಿಂದ ನಡೆಸಬೇಕೆಂಬ ಗೊತ್ತುವಳಿ ಪಾಸಾಯಿತು.

ಕಳೆದ ೨೨ ರಲ್ಲಿ ನೇರಳಕಟ್ಟೆಯಲ್ಲಿ ರೈತರ ಸಭೆಯೊಂದು ಸೇರಿಪ್ರಕೃತದ ಆಹಾರಪರಿಸ್ಥಿತಿಯನ್ನು ಚರ್ಚಿಸಿತು.

ಮದ್ರಾಸ ಸರಕಾರದವರು ಮತ್ತೆ ಎಂಟು ಜಿಲ್ಹೆಗಳಲ್ಲಿ ಅಕ್ಟೋಬರ ೧ ರಿಂದ ಪಾನನಿರೋಧವನ್ನು ಜಾರಿಯಲ್ಲಿ ತಂದರು. ಇದರಿಂದ ಪ್ರಾಂತದ ಎರಡು ಮೂರಾಂಶ ಭಾಗದಲ್ಲಿ ಪಾನನಿರೋಧ ಜಾರಿಯಲ್ಲಿ ಬಂದಂತಾಯಿತು. ಈ ಎಂಟು ಜಿಲ್ಹೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಹೆಯೂ ಇದೆ.

ಪಡುಬಿದರೆಯಲ್ಲಿ ಕಳೆದ ೧೮ ರಲ್ಲಿ ಶ್ರೀ ಪಿ. ರಾಮರಾಯರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಮೈಸೂರು ಹೈದರಾಬಾದುಗಳಲ್ಲಿ ನಡೆಯುತ್ತಿರುವ ದಬ್ಬಾಳಿಕೆಯನ್ನು ನಿಷೇಧಿಸಲಾಯಿತು.

ಕಳೆದ ೧೩ ರಲ್ಲಿ ಉಡುಪಿಯ ಬಂಟಕಲ್ಲಿನ ಶಾಖೆಯಲ್ಲಿ ಒಕ್ಕಲಿಗರ ಸಭೆಯೊಂದು ಜರುಗಿ ಕಾಯಂಗೇಣಿ ಪದ್ಧತಿ ಮುಂತಾದ ಹಲವು ವಿಷಯಗಳ ಮೇಲೆ ಅನೇಕರು ಭಾಷಣ ಮಾಡಿದರು.

ಕಾರಕಳ ಸರ್ಕಲ ಕಾಂಗ್ರೆಸ ಸಮಿತಿಯು ಕಳೆದ ತಾ. ೧೭ ರಲ್ಲಿ ಕೂಡಿ ಕಳ್ಳಪೇಟೆ ಮತ್ತು ಲಂಚಗುಳಿತನಗಳ ವಿರುದ್ಧ ಗೊತ್ತುವಳಿಗಳನ್ನು ಪಾಸು ಮಾಡಲಾಯಿತು.

ಸುಳ್ಯಪೇಟೆಯಲ್ಲಿ ಹುಚ್ಚುನಾಯಿಯ ಕಾಟವು ಹೆಚ್ಚಾಗಿ ಅನೇಕ ದನ ಎಮ್ಮೆಗಳನ್ನು ಕಚ್ಚಿದ್ದಲ್ಲದೆ ಮನುಷ್ಯರಿಗೂ ಕೂಡ ಬಹಳ ತೊಂದರೆ ಕೊಡುತ್ತಲಿವೆ. ಸಂಬಂಧಪಟ್ಟ ಅಧಿಕಾರಿಗಳು ಅತ್ತ ಗಮನ ಕೊಡಬೇಕಾಗಿ ಜನ ಹಾರೈಸುತ್ತದೆ.

## -:- ಈ ವಾರದ ಕತೆ -:-

# ದ್ರೋಹಿ-ಯಾರು?

ನ. ಶ್ಯಾಮ ಸೆಟ್ಟಿ ಇವರಿಂದ

ಕಾರ್ಕಳವು ನಮ್ಮ ಮುಖ್ಯ ಪಟ್ಟಣ. ಆಧುನಿಕ ಶಹರವಲ್ಲದಿದ್ದರೂ ಪುರಾಣಪುಣ್ಯ ಸ್ಥಳ. ಎತ್ತರದ ಬಂಡೆಗಲ್ಲಿನ ಮೇಲೆ ೪೨ ಅಡಿ ಎತ್ತರವಾದ ಗೋಮಟೇಶ್ವರನ ಪ್ರತಿಮೆಯಿದೆ. ಅಜಾನುಬಾಹುವಾದ ವಿಲಕ್ಷಣಪ್ರತಿಮೆಯುನಯವಾಗಿ ಕೆತ್ತಲ್ಪಟ್ಟು ಎಂಥವರನ್ನೂ ದಂಗುಬಡಿಸಿ ನೋಡುವವರ ಮನಸ್ಸನ್ನು ಆಕರ್ಷಿಸುತ್ತಿತ್ತು.

ಸಂಜೆ. ಆ ನಮ್ಮ ರವಿಯು ಪಶ್ಚಿಮದ ಕಡಲ ತಡಿ ಹಿಡಿದು ವಿಶ್ರಾಂತಿ ಪಡೆಯಲುದ್ಯುಕ್ತವಾದ ಋತುಮಾನಗಳ ಕಾಲ ಪೆಸರರಿಯದ ಕಣ್ಮನಕ್ಕೆ ತೋರುವ ಹೊಲಗದ್ದೆಗಳಲ್ಲಿ ಪಚ್ಚೆ ಪೈರುಗಳು— ಆನಂದದಿಂದ ತಲೆಯಲ್ಲಾಡಿಸುವ ಕಾಲವೆಂದಿಷ್ಟೇ ಹೇಳಬಲ್ಲೆ.

ದುಃಖದಲ್ಲಿಯಾಗಲೀ ಸುಖದಲ್ಲಿಯಾಗಲೀ ವಿಹಾರ ಹೊರಡಬೇಕಾದರೆ— ಗೋಮಟೇಶ್ವರನು ನಿಂತಿರುವ ಆ ಬಂಡೆಕಲ್ಲೆಡೆಗೇ. ಹಿಂದು, ಮುಸಲ್ಮಾನ, ಕ್ರಿಶ್ಚಿಯನ್, ಎಂಬಭೇದಭಾವವಿಲ್ಲದೆ ಬಂದು ಕುಳಿತು ಒಂದೆರಡು ಗಂಟೆ ಕಾಲ ನಕ್ಕು ನಲಿದು ಮನೆಗೆ ಹೋಗುವ ವಾಡಿಕೆ.

ಮಿತ್ರರಿಬ್ಬರು ಆಗಲೇ ಬಂದಿರುವ ವಾರ್ತಾಪತ್ರಿಕೆಯನ್ನು ಬಿಚ್ಚಿದರು. ವಿವಿಧ ವಾರ್ತೆಗಳಿಂದ ತುಂಬಿತ್ತು. ಜಿನ್ನಾ ಸಾಹೇಬರು ನಡುಗಾಲ ಸರಕಾರಕ್ಕೆ ಸೇರುವುದಿಲ್ಲವೆಂದು ಖಂಡತುಂಡಾಗಿ ಹೇಳಿರುವದಲ್ಲದೆ "ಡೈರೆಕ್ಟ ಆ್ಯಕ್ಷನ್" ಆಗಲೇ ಪ್ರಾರಂಭಿಸಲಿಕ್ಕೆ ಸನ್ನದ್ಧರಿದ್ದರು.

ಕೇಶವ ಮತ್ತು ಹಮೀದ್ ಇವರು ಬಾಲ್ಯದಿಂದಲೂ ಗೆಳೆಯರು. ಒಂದನೇ ಕ್ಲಾಸಿನಿಂದ ಹಿಡಿದು S. S. L. C. ತನಕ ಜತೆ ಹಕ್ಕಿಗಳಂತೆ ಪಾಸಾಗಿ ಬಂದಿರುವರು. ಮನೆಗಳು ಅಕ್ಕಪಕ್ಕದಲ್ಲಿದ್ದವು. ಕೇಶವನ ಮನೆಯ ಹಬ್ಬ ಹುಣ್ಣಿಮೆಗಳಲ್ಲಿ ಹಮೀದಗೆ ಬಹಳ ಇಷ್ಟ. ಏನೊಂದು ವಿಶೇಷ ತಿಂಡಿಯಿದ್ದರೂಹಮೀದನಿಗೆಪಾಲುಂಟು. ಒಂದೇ ಮಾತಿನಲ್ಲಿ ಹೇಳುವುದಾದರೆ, ಎಂಥ ಸಂದರ್ಭದಲ್ಲಿಯೂ ಒಬ್ಬರಿಗೊಬ್ಬರು ಪ್ರಾಣ ಕೊಡುವಷ್ಟು ಮಿತ್ರರಾಗಿದ್ದರು.

ಪತ್ರಿಕೆಯನ್ನು ಇಬ್ಬರೂ ಓದಿದರು. ಜಿನ್ನಾರವರ ಹಟಮಾರಿತನಕ್ಕಾಗಿ ಕೇಶವನು ತುಂಬ ಮರುಗಿದನು. ಭಾರತದಲ್ಲಿ ಸ್ವಾತಂತ್ರ್ಯ ಪಡೆವಲ್ಲಿ ಜಿನ್ನಾರವರು ಬಂದು ಅಡ್ಡಗೊಡಲಿ ಹಿಡಿದಲ್ಲಾ!" ಎಂದು ಹಮೀದ್ ಚಿಂತಾಯುಕ್ತನಾಗಿ, ಮುಖವನ್ನು ಪಶ್ಚಿಮ ದಿಕ್ಕಿಗೆ ತಿರುಗಿಸಿ ರವಿಯ ಅಸ್ತಮಾನದ ಸೊಬಗನ್ನು ನಿರೀಕ್ಷಿಸಿ ಅದಾವುದೊ ದೀರ್ಘ ಆಲೋಚನಾಯುಕ್ತನಾದನು. "ಹಮೀದ್—ನಡೆ, ಹೋಗೋಣ." ಎಂದು ಕೇಶವನು ಕೇಳಿದಾಗಲೇ ಎಚ್ಚರ. "ಅದೇಕೆ ಅಷ್ಟು ಅವಸರ? ಇನ್ನೂ ಗಂಟೆ ೬ ಆಗಲಿಲ್ಲ" ಎಂದು ಮುಖ ತಿರುಗಿಸಿ ನಸುನಕ್ಕನು. ಕೇಶವನು ಸುಮ್ಮನಾದನು. ಹಮೀದನು ಮಾತು ಮುಂದುವರಿಸುತ್ತಾ "ಕೇಶವ ತಿಳಿಯಿತು. ಮುಸ್ಲಿಂಲೀಗು ಸ್ವಾತಂತ್ರ್ಯಕ್ಕೊಂದು ತೊಡರು. ಜಿನ್ನಾರವರು ಸ್ವಾರ್ಥಪರವಶರಾಗಿ, ಮುಸ್ಲಿಂ ಜನಾಂಗವನ್ನೇ ಅಧೋಗತಿಗಿಳಿಸುವುದು ನಿಶ್ಚಯ. ಪವಿತ್ರವಾದ ಖುರಾನಿಗೆ ಕುಂದುಂಟು ಮಾಡುವರು. ಭಾರತವು ನಮ್ಮೆಲ್ಲರ ದೇಶ. ಹಿಂದು, ಮುಸಲ್ಮಾನ, ಇನ್ನಿತರ, ಎಷ್ಟು ಜನಾಂಗದವರಿದ್ದರೂ, ನಾವು ಸಹೋದರರು. ಪಾಕಿಸ್ತಾನವೆಂಬುದು* ಮುಂದಕ್ಕೆ ಜಿನ್ನಾ ಸಾಹೇಬರೊಬ್ಬರೆ ಕಟ್ಟಿಕೊಳ್ಳುವ ಗಾಳಿ ಗೋಪುರ" ಎಂದು ತನ್ನ ಖಂಡಿತಾಭಿಪ್ರಾಯವನ್ನು ಉತ್ತರಿಸಿದನು.

"ಕೇಶವನು, ಹಮೀದ ನತ್ತ ಮುಖ ತಿರುಗಿಸಿ "ಅಹವು" ಎಂದಿಷ್ಟೇ ಸಮರ್ಥಿಸಿದನು.

'ಕಲ್ಕತ್ತ, ಬೊಂಬಾಯಿ, ಲಾಹೋರುಗಳಲ್ಲಿ ಹಿಂದು—ಮುಸಲ್ಮಾನ ಜಗಳಗಳಾಗುತ್ತಲಿವೆ. ಬಹುಸಂಖ್ಯಾಕ ಹಿಂದುಗಳಿರುವಲ್ಲಿ ಮುಸಲ್ಮಾನರೂ, ಅಲ್ಪಸಂಖ್ಯಾಕ ಹಿಂದುಗಳಿರುವಲ್ಲಿ ಹಿಂದುಗಳೂ ಚೂರಿ ಇರಿತಗಳಿಂದ ಸಾಯುತ್ತಲಿರುವರು. ಇದೀಗ ಅತ್ಯಾಚಾರ, ಅನಾಗರಿಕತೆ, ಹಾ! ಭಾರತದ ದೌರ್ಭಾಗ್ಯವೇ" ಎಂದು ಪಶ್ಚಾತ್ತಾಪ.

ಗಂಟೆ ಏಳಂಕೆ ದಾಟ ೧೦ ನಿಮಿಷವನ್ನು ಕೇಶವನ ಕೈಗಡಿಯಾರತೋರಿಸುಸುತ್ತಿತ್ತು. ಇಬ್ಬರೂ ಕೈಜೋಡಿಸಿ ನಿಧಾನವಾಗಿ ಬಂಡೆಯ ಮೇಲಿಂದ ಮೆಟ್ಟಿಲನ್ನು ಲೆಕ್ಕ ಮಾಡುತ್ತಲೆಂಬಂತೆ ಇಳಿದರು. ಕೆಳಗೆ ಬಂದಂತೆಯೇ ರವಿಯ ಕಿರಣಕ್ಕೆ ಮಾಂದ್ಯಉಂಟಾಗುತ್ತಬಂತು. ಇನ್ನೂ ಭೂಮಿಗೆ ಇಳಿಯಲು ೪–೫ ಸೋಪಾನ ಇರುತ್ತಿರಬಹುದು. ಆಕಸ್ಮಿಕವಾಗಿ ಕೇಶವನು ಎಡವಿ-ಎರಡು ಹೆಜ್ಜೆಗಳು ತಪ್ಪಿದವು. ಹಮೀದನ ಹಿಡಿದ ಕೈಗೂ ಸಾಕಷ್ಟು ಬಲವಿಲ್ಲದೆ ಹೋಯಿತು. ಜೋರಲಂಚಿಗೆ ತಲೆ ಡಿಕ್ಕಿ ಹೊಡೆದು ಭೂಮಿಗೆ ಉರುಳಿ ಬಿದ್ದನು. ಪೆಟ್ಟು ಮಿತಿಮೀರಿತು. ಹಮೀದನು ಕೇಶವನನ್ನು ಕೆಲವೇ ಸೆಕುಂದ ಕಲ್ಲುಬೆಂಚಿಯಂತೆ ಪ್ರತೀಕ್ಷಿಸಿದ; ತತ್ಕ್ಷಣ ಹಮೀದನುನಿದ್ದೆಯಿಂದ ಎಚ್ಚತ್ತವನಂತೆ ಗಡಿಬಿಡಿಯಿಂದ ಹಾರಿ ಕೇಶವನನ್ನು ಎತ್ತಿ ಹಿಡಿದು, ಆತನ ತಲೆಯನ್ನು ತನ್ನ ದೇಹಕ್ಕೆ ಆನಿಸಿಕೊಂಡು "ಕೇಶವ" ಎಂದ. ಮರುಮಾತಿಲ್ಲ. ಹಣೆಗೆ ಬಂಡೆಯು ಬಲವಾಗಿ ಹೊಡೆದುದರಿಂದ ಅಗಲವಾದ ಗಾಯದಿಂದ ರಕ್ತವು ಧಾರಾಕಾರವಾಗಿ ಹರಿಯುತ್ತಿರುವುದನ್ನು ಹಮೀದನು ಕಂಡ. ಏನು ಮಾಡಬೇಕೆಂಬುದು ನೆನಪಿಗೆ ಬರಲಾರದಾಯಿತು. ಕಡೆಗೆ ಪ್ರಯತ್ನಪಟ್ಟು ಆಲೋಚಿಸಿ, ಉಟ್ಟ ಬಟ್ಟೆಯನ್ನು ತುಂಡರಿಸಿ ಹರಿಯುವ ರಕುತವನ್ನು ನಿಲ್ಲಿಸಿದ. ಮತ್ತೂ ಸೈರಿಸದೆ, ಮನದ ಕಲಮಲವನ್ನು ಹೋಗಲಾಡಿಸಲು "ಕೇಶವ" ಎಂದ. ಮರುಧ್ವನಿಯಿಲ್ಲ. ಬದಲು ಕಡಿದಾದ ನಿಶ್ವಾಸ ಮಾತ್ರ. ಹಮೀದನು ಕಂಗಾಲಾದ. ಸಮೀಪದಲ್ಲಿ ನೀರು ಇಲ್ಲದಾಗಿತ್ತು. ತಾನು ಧರಿಸಿದ ಅಂಗಿಯನ್ನು ತೆಗೆದು ಗಾಳಿಯನ್ನು ಕೇಶವನಿಗೆ ಬೀಸಿ ತಂಪನ್ನು ಇತ್ತ. ಕೇಶವನು ನಿಧಾನವಾಗಿ ಕಣ್ತೆರದ. ಹಮೀದನಿಗೆ ಹೋದ ಜೀವ ಕೂಡಿಬಂದಂತಾಯಿತು. ತಗ್ಗಿದ ಸ್ವರದಿಂದ "ನೀರು" ಎಂದ. ಕೇಶವನಿಗೆ ತಾಳೆಂದು ಹೇಳಿ ಬಂಡೆಗೆ ಒರಗಿಸಿ ಓಡಿಹೋಗಿ ನೀರು ತಂದು ಕುಡಿಸಿದ. ಹೇಗೋ ಕೇಶವನನ್ನು ಆತನ ಮನೆಗೆ ಮುಟ್ಟಿಸಿ ಆ ರಾತ್ರಿ ಕಳೆದನು. ನಿಧಾನವಾಗಿ ಕೇಶವನ ಗಾಯವು ವಾಸಿಯಾಗುತ್ತ ಬಂದರೂ, ಹಿರಿದಾದ ಗಾಯವು ಮಾತ್ರ ಅಚ್ಚಳಿಯದೆ ಮುಖದ ಮೇಲೆ ಎದ್ದು ಕಾಣಿಸುತ್ತಿತ್ತು.

ಇವರಿಬ್ಬರೂ S. S. L. C. ತನಕ ಓದಿ ತೇರ್ಗಡೆಯಾದವರು. ಹೆಚ್ಚಿನ ವಿದ್ಯಾಭ್ಯಾಸಕ್ಕೆ ಎಡೆ ಇಲ್ಲದೆ ಜೀವನ ನಿರ್ವಾಹಕ್ಕಾಗಿ ಮುಂಬಯಿಗೆ ಹೋಗುವ ಅಭಿಪ್ರಾಯ ಮಾಡಿ ತಂದೆತಾಯಿಗಳ ಅಪ್ಪಣೆ ಪಡೆದು ರೈಲು ಹತ್ತಿದರು. ಕೆಲವುಕಮುದಲ್ಲಿಯೇ ನೌಕರಿ ಸಿಕ್ಕಿತು. ಒಂದೆರಡು ಮೈಲುಗಳ ಅಂತರದಲ್ಲಿ ಅವರಿಬ್ಬರ ಬಿಡಾರ. ರಜಾ ದಿನಗಳಲ್ಲಿ ಹಮೀದನ ಮನೆಗೆ ಕೇಶವನು ಬರುವ ವಾಡಿಕೆ. ದಿನವಿಡೀ ತಿರುಗಾಡಿ ೬ ದಿನಗಳ ಮಾತನ್ನು ಒಂದೇ ದಿನ ಆಡಿ ಬಿಡುತ್ತಿದ್ದರು.

ನಡುಗಾಲ ಸರಕಾರಕ್ಕೆ ಬಹಿಷ್ಕಾರ ಹಾಕಿ ಅಲ್ಲಲ್ಲಿ ಮುಸ್ಲಿಂಲೀಗ್ ಮುಖಂಡರು ಉದ್ರೇಕಕರ ಭಾಷಣಗಳನ್ನು ಕೊಡುತ್ತಿದ್ದರು. ಕೆಲವು ಹಿಂದು ಮುಸ್ಲಿಂ ಗಲಭೆಯು ದಿನ ದಿನಕ್ಕೆ ಜಾಸ್ತಿಯಾಗಹತ್ತಲಿತ್ತು. ಹಮೀದನು ಯಾರೋ ತನ್ನ ಮುಸಲ್ಮಾನ ಮಿತ್ರನ ಒತ್ತಾಯದಿಂದ ಮುಸ್ಲಿಂ ಲೀಗಿನ ಗುಪ್ತ ಅಧಿವೇಶನಕ್ಕೆ ಹೋಗಿದ್ದನು. ಅಲ್ಲಿ ಅನೇಕ ಮುಖಂಡರ ಉಗ್ರ ಭಾಷಣ. ಹಿಂದುಗಳ ಮೇಲೆ ದೋಷಾರೋಪಣೆ. "ಪಾಕಿಸ್ಥಾನ ಸ್ಥಾಪಿಸಿದರೆ ಇನ್ನಿತರ ಮುಂಬರಿದ ದೇಶಗಳಂತೆ, ನಮ್ಮ ಮುಸ್ಲಿಂ ಜನಾಂಗವು ಮೆರೆಯ ಬಹುದು. ಆರ್ಥಿಕ ಸಾಮಾಜಿಕ, ಭೌತಿಕಕ್ಷೇತ್ರಗಳಲ್ಲಿ ಹಿಂದುಗಳು ನಮ್ಮ ಕಡು ವೈರಿಗಳು" ಎಂದು ತಮ್ಮ ಭಾಷಣದ ವೈಖರಿಗಳಿಂದ ಎಂಥ ನಪುಂಸಕನೂ ತಕ್ಷಣ ಜೀವದಾಸೆ ಬಿಟ್ಟು ಹಿಂದುಗಳ ಹತ್ಯೆಗಾಗಿ ಇಳಿಯುವಷ್ಟು ಉದ್ರಿಕ್ತಗೊಳಿಸಿದ್ದರು. ಅಧ್ಯಕ್ಷನು ತನ್ನ ಭಾಷಣವನ್ನು ಮುಗಿಸಿ ಗಂಭೀರದಿಂದ "ಹಿಂದುಗಳು ತನ್ನ ಮಿತ್ರನಾಗಲೀಯಾ—ತನ್ನೊಡೆಯನಾಗಲೀ ಆತನನ್ನು ತಕ್ಷಣ ಕೊಲ್ಲಬೇಕು. ಇದಕ್ಕೆ ಒಪ್ಪುವವರು ಕೈಯೆತ್ತಿರಿ. ಅಲ್ಲದೆ ದೃಢ ನಂಬುಗೆಯನ್ನು ಕೊಡಿರಿ" ಎಂದ. ಉಸುರುವುದೇತಡ. ಎಲ್ಲರೂ ಒಮ್ಮತದ ಒಪ್ಪಿಗೆಯನ್ನು ತೋರಿಸಿ, ಒಬ್ಬೊಬ್ಬರೇ ಪ್ರತಿಜ್ಞಾಪತ್ರಕ್ಕೆ ಸಹಿ ಹಾಕಿ ಹೊರಬಿದ್ದರು. ಜತೆಗೆ ಹಮೀದನು ಸಹಿ ಹಾಕಿದನು.

ಅಲ್ಲಲ್ಲಿ ಹಿಂದುಗಳನ್ನು ಕೊಲ್ಲುವ ಚೂರಿಗಳನ್ನು ಲೀಗ್ ಸಂಸ್ಥೆಯು ಗುಪ್ತವಾಗಿ ಸರಬರಾಜು ಮಾಡುತ್ತಿದ್ದಿತು. ಹಮೀದನಿಗೂ ಒಂದು ಪೆಟ್ಟಿಗೆ ತುಂಬ ಚೂರಿ ಸಿಕ್ಕಿತು. ಇಂದೀಗ ಹಮೀದನು ಅಚ್ಚ ಮುಸಲ್ಮಾನಸೇವಕ. ಜಿನ್ನಾರವರು ಆತನ ಮನಸ್ಸಿನ ದೇವರು. ಇಷ್ಟು ದಿನ ಜಿನ್ನಾರವರನ್ನು ತಿರಸ್ಕರಿಸಿದುದಕ್ಕೆ ಪಶ್ಚಾತ್ತಾಪಗೊಂಡನು.

"ಕೇಶವನು ಹಿಂದು. ಅಲ್ಲದೆ ಅಜನ್ಮ ಮತಾಂತರದ ವೈರಿ. ಪಾಕಿಸ್ತಾನಕ್ಕೆ ಶತ್ರು. ನನ್ನ ಹಿತೈಷಿಯೇ ಅಲ್ಲ. ನಿಜವಾಗಿಯೂ ಶತ್ರು' ಅವನೊಬ್ಬನೇ ಅಲ್ಲ-ಪ್ರತಿಯೊಬ್ಬ ಹಿಂದುವೂ ಸಾಯಲೇಬೇಕು." ಎಂದು ಹಮೀದನು ಕ್ಷೋಭೆಗೊಂಡನು.

ಎಂದಿನಂತೆಯೇ ಆ ಭಾನುವಾರ ಕೇಶವನಿಗೆ ಮಿತ್ರಭೇಟಿಯ ಆನಂದದ ದಿನ. "ಇಂದು ನಮ್ಮಿಬ್ಬರಿಗೂ ಸಮುದ್ರದಲ್ಲಿ ಈಜಾಟದ ಸ್ಪರ್ಧೆ ನಡೆಯಬೇಕು. ಯಾರು ಸೋಲುವರೋ ಅವರು ಇಂದಿನ ಆನಂದದ ಔತಣ ಏರ್ಪಡಿಬೇಕು" ಎಂದು ಕೇಶವನು ಗುಡಾಕಾರ ಹಾಕಿಕೊಂಡನು. ಎಂದಿನಂತೆಯೇ ಲಘೂಪಹಾರವನ್ನು ತೀರಿಸಿ, ಅಲಂಕರಿಸಿಕೊಂಡು ಟ್ರಾಂ ಹತ್ತಿದನು. ಹಮೀದನ ಬಿಡಾರದ ಬಳಿ ಇಳಿದು ನೇರವಾಗಿ ಒಳಗೆ ಪ್ರವೇಶಿಸಿದನು. ಹಿಂದಿನಂತೆ ಬಂದಾಗ ಸ್ವಾಗತವಿಲ್ಲ. ಪರಸ್ಪರ ಆಲಿಂಗನವಿಲ್ಲ. ಹಮೀದನು ಗಂಭೀರವದನನಾಗಿದ್ದನು. ಅವನ ದೃಷ್ಟಿಗೆ ಕೇಶವನು ಕಡುವೈರಿಯಾಗಿಯೇ ತೋರುತ್ತಿದ್ದನು. "ಕೇಶವನು 'ಹಮೀದ್' ಚಿಂತಾಯುಕ್ತನಾಗಿ ಕುಳಿತಿರುವೆ. ಶರೀರಕ್ಕೆ ಸೌಖ್ಯವಿಲ್ಲವೇ" ಎಂದು ಸ್ನೇಹ ಪೂರ್ಣಸ್ವರದಿಂದ ತಲೆಗೆ ಕೈಯಿಕ್ಕಲು ಹೋದನು. ಹಮೀದನು ಕೈಯನ್ನು ಕೂಡಲೇ ತಡವರಿಸಿ "ದೂರ ನಿಲ್ಲು" ಎಂದು ಗಂಭೀರವಾಗಿ ನುಡಿದು ಎದ್ದು ನಿಂತನು. ಕೇಶವನು ತಬ್ಬಿಬ್ಬಾದನು. ಅವನಿಗೊಂದೂ ಗೋಚರಿಸಲಿಲ್ಲ. ತಾನೇನಾದರೂ ತಪ್ಪಿದೆನೋ ಎಂದು ತನ್ನಲ್ಲಿಯೇ ವಿಚಾರಿಸಿಕೊಂಡನು. "ಹೀಗೇಕೆ ಸಿಟ್ಟು ಹಮೀದ?" ಎಂದು ಮತ್ತೂ ಹತ್ತಿರ ಸರಿದನು.

ಹಮೀದನು ಸೊಂಟದಲ್ಲಿ ಇಟ್ಟುಕೊಂಡಿದ್ದ ಹರಿತವಾದ ಚೂರಿಯನ್ನು ಥಟಕ್ಕನೆ ಹೊರಕ್ಕೆಳೆದು "ಕೇಶವಾ—ನೀನು ಮುಸಲ್ಮಾನನಾಗಿ ಯಾಕೆ ಹುಟ್ಟಲಿಲ್ಲ? ನೀನು ದುಷ್ಟನಾದ ಹಿಂದುವಲ್ಲವೇ? ನಮ್ಮ ಪಾಕಿಸ್ತಾನಕ್ಕೆ ಕಡುವೈರಿ. ದುಷ್ಟಾ-ಇಂದೀಗ ನಿನ್ನನ್ನು ಕೊಲ್ಲುವೆನು!" ಎಂದು ಹೇಳಿ ಕೊಠಡಿಯ ಬಾಗಿಲನ್ನು ಹಾಕಿ ಬೀಗ ಹಾಕಿಕೊಂಡನು. "ಮಿತ್ರಾ, ನನ್ನನ್ನು ಕೊಲ್ಲಬೇಕೆಂದಿರುವೆಯಾದರೆ, ಇಷ್ಟೇಕೆ ಗಲಾಟೆ, ಸಿಟ್ಟು, ಬಿರುನುಡಿಗಳು? ನಿನ್ನ ಮನಸ್ತೃಪ್ತಿಗಾಗಿ ನನ್ನ ಶಿರವನ್ನು ಕೊಡಲು ತಯಾರಿರುವೆನು. ಆದರೆ ಈ ತರದ ದುರಾಲೋಚನೆ ಬಂದುದಕ್ಕಾಗಿ ದುಃಖರಡುವೆನು." ಎಂದನು. ಕೇಶವನು ದೀನ ಸ್ವರದಿಂದ ಮತ್ತೂ—"ಹಮೀದಾ, ನಾನು ಇಂದು ಸಾಯುವದಕ್ಕಾಗಿ ವ್ಯಥಿಸಲಾರೆ. ನಿನ್ನ ಜುಪಡೆಕೆಯು ಪಾಕಿಸ್ತಾನ ಸಿಕ್ಕಿದರೆ ಧನ್ಯನು" ಎಂದು ಕೊಂಚ ತಡವರಿಸಿ "ಹಮೀದಾ, ನಾನು ನಿನ್ನನ್ನು ಆತಿ ಜೀವದ ಗೆಳೆಯನೆಂದು ಬಗೆದು ನಿನ್ನಿಂದ ಇಂದಿನ ವರೆಗೆ ಜೀವವನ್ನು ಕುಡಿಯುತ್ತಿದ್ದುದರ ಆಸೆಯೊಂದನ್ನು ಹೋಗಲಾಡಿಸಲಾರದುದಕ್ಕೆ, ಈ ನನ್ನ ಜೀವವು ನನ್ನ ಮಿತ್ರನ ಒಳಿತಿಗಾಗಿ ಹೋಗಲಾಡಿಸುವ ಈ ವೈಭವದ ದಿವದಲ್ಲಿ ನೀನೊಮ್ಮೆ ನನ್ನ ಬೇಡಿಕೆಯನ್ನು ಈಡೇರಿಸಿಕೊಡಲಾರೆಯಾ?" ಎಂದನು. ಕೇಶವನ ವಚನಕ್ಕೆ ಕಠಿಣಕಲ್ಲಾದರೂ ಕರಗಲಿದ್ದರೂ, ಹಮೀದನ ಹೃದಯ ಮಾತ್ರ ಕರಗಿರಲಿಲ್ಲ. ಕೊಂಚ ತಡೆದು—"ನಿನ್ನ ಪಾಪಿ ಹೃದಯಕ್ಕೆ ಟೀ ಟೀ" ಕೊಂಚ ಯೋಚಿಸಿ "ಇರಲಿ ಕೊಲ್ಲುವ ಪ್ರಾಣಿಯನ್ನು ತಣಿಸಿ ಕೊಲ್ಲಬೇಕೆಂದು ಖುರಾನ್ ಶರೀಫದ ಮಾತಿದೆ" ಎಂದು-ಕೇಶವನತ್ತ ಮುಖ ತಿರುಗಿಸಿ "ನೀಚಾ-ಸ್ವಲ್ಪತಡೆ" ಎಂದು ಗರ್ಜಿಸಿ ಒಳಹೊಕ್ಕನು.

ಒಲೆಯ ಮೇಲೆ ನೀರಿಟ್ಟು ಟೀ ತಯಾರಿಸುತ್ತಲಿದ್ದನು. ಸಂಗಡಲೇ ಚೂರಿಯನ್ನು ಕೈಯಲ್ಲಿ ಹಿಡಿದುಕೊಂಡಿದ್ದನು. ಬೆಂಕಿಯಲ್ಲಿ ನೀರು ಕುದಿಯುತಿರುವಂತೆಯೇ ಕೇಶವನ ಮನಸ್ಸು ಕುದಿಯುತ್ತಿತ್ತು. ಅತ್ತ ಹಮೀದನ ಕಾಲು ಮಾತ್ರ ತಡವರಿಸದೆ ಚಲಿಸುತ್ತಿತ್ತು. ಗಡಿಬಿಡಿಯಲ್ಲಿ ಒಲೆಯಲ್ಲಿಯ ಕುದಿಯುವ ನೀರಿಗೆ ಸಕ್ಕರೆ ಹಾಕಿದನು. "ಛೆ" ಎಂದ. ಪುನಃ ಮನವನ್ನು ಒತ್ತರಿಸಿ ಸರಿಯಾಗಿ ಟೀಯನ್ನು ತಯಾರಿಸಲು ಸುರುಮಾಡಿದನು. ಕೇಶವನು ಜೀವದಾಸೆಯನ್ನು ತ್ಯಜಿಸಿದನು. ನಿಧಾನವಾಗಿ ವಿಮರ್ಶಿಸಿದಾಗ "ಮಿತ್ರದ್ರೋಹಿ" ಯೆಂದು ಕಂಡುಕೊಂಡು ಸಿಟ್ಟಾದನು. ಸುತ್ತಲೂ ನೋಡಿದನು. ಒಂದು ಮೂಲೆಯಲ್ಲಿ ಪೆಟ್ಟಿಗೆಯೊಂದು ಇತ್ತು. ಬಾಗಿಲು ತೆರೆದನು, ತುಂಬ ಚೂರಿಗಳು! ಒಡನೆಯೇ ರೋಮಾಂಚವಾಯಿತು. ಅದಾವುದೋ ನವಚೈತನ್ಯವು ಉಕ್ಕಿಬಂತು. ಚೂರಿಯೊಂದನ್ನು ಆರಿಸಿ ಬಲಗೈಯಿಂದ ಹಿಡಿದು ಎದ್ದು ನಿಂತನು. ಭೀಕರ ದೃಶ್ಯಗಳು ಕಣ್ಣಮುಂದೆ ಕ್ಷಣಹೊತ್ತು ಮಿನುಗಿದವು!

ಹತ್ತು ನಿಮಿಷಗಳು ಕಳೆಯಲಿಲ್ಲ. ಒಂದು ಕೈಯಲ್ಲಿ ಟೀ ಪಾತ್ರೆ, ಮತ್ತೊಂದು ಕೈಯಲ್ಲಿ ಚೂರಿ ಹಿಡಿದುಕೊಂಡು ಹಮೀದ್ ಬಂದೇಬಿಟ್ಟನು. "ಇಗೋ ಬೇಗನೆ ಕುಡಿ" ಎಂದು ಟೀ ಕಪ್ಪನ್ನು ಚಾಚಿ ಇದುರಿಗಿರುವ ನಯವಾದ ಮೇಜಿನ ಮೇಲೆ ಇಟ್ಟನು. ಉಷ್ಣತೆಯಿಂದನೊಂದು ಬೆಂದ ಟೀ-ಯು ತಣ್ಣಗಿನ ವಾತಾವರಣವನ್ನು ಮುಟ್ಟಿ ಲೀನವಾಗಲು ಆಶಿಸಿ ಸುವಾಸನೆಯ ಆವಿಯನ್ನು ಸುರುಳಿಯಾಗಿ ಸೂಸುತ್ತ ಹೂದಾನಿಯಂತೆ ರಾರಾಜಿಸುತ್ತಿದ್ದುದು ಅವರಿಬ್ಬರ ಮನಕ್ಕೆ ಅರಿವಿಲ್ಲದೆ ಹೋಯಿತು.

ಹಮೀದನು ಕೇಶವನ ಎದುರಿಗೆ ಕೆಲವೇ ಹೆಜ್ಜೆಗಳಿಟ್ಟು ಬಳಿಸಾರಿ "ಲೇ! ನಿನ್ನ ಅಪೇಕ್ಷೆಯ ಮೇರೆಗೆ ನನ್ನ ಸ್ವಹಸ್ತದಿಂದ ಟೀ ತಯಾರಿಸಿ ತಂದಿರುವೆನು; ಬೇಗನೆ ಕುಡಿ"-ಎಂದನು. ಕೇಶವನು ತಾನೊಂದು ಹೆಜ್ಜೆಯನ್ನು ಮುಂದೆ ಇಟ್ಟು "ನೀಚಾ! ಇಂದು ಈ ತರಹದ ವಿಶ್ವಾಸಘಾತಕವನ್ನು ಯಾರು ಹೇಳಿಕೊಟ್ಟರು? ನಿನ್ನಿಂದ ಆಗುವ ಕೃತಘ್ನತೆಗಾಗಿ ದೈವವು ನನಗಾಗಿ ಕೊಡಿಸಿದ ಆಯುಧವನ್ನು ಪರೀಕ್ಷಿಸಲಾರೆಯಾ?" ಎಂದು ತನ್ನ ತೀಕ್ಷ್ಣವಾದ ಚಾಕುವನ್ನು ಎತ್ತಿ ಹಮೀದನಿಗೆ ಇರಿಯಲು ಮುಷ್ಟಿ ಬಿಗಿಹಿಡಿದನು. "ಪ್ರತಿರೂಪದ ಚಾಕು ಈ ಕೇಶವನಿಗೆ ಹೇಗೆ ಬಂತು?" ಎಂದು ಅರೆಗಳಿಗೆ ಆಲೋಚನಾ ಮಗ್ನನಾಗಿ ಬಲಗೈಯನ್ನು ಎತ್ತಿ ಪರೀಕ್ಷಿಸಿದನು. ಚಾಕು ಇದೆ, ಮುಷ್ಟಿ ಮಾತ್ರ ಬಿಗಿಹಿಡಿಯಲಿಲ್ಲವೆಂಬ ನೆನಪಿಕೆ ಬಂದು ಬಿಗಿಹಿಡಿಯಲು ಹೊತ್ತು ಕಳೆಯಲಿಲ್ಲ.

ಜೀವ ಒಂದು-ಶರೀರವೆರಡು ಎಂಬಂತೆ ಇದ್ದ ಪರಮ ಮಿತ್ರರು ಈ ತರದ ವಿಕರಾಳ ಕಾರ್ಯಕ್ಕೆ ಎದೆ ಗಟ್ಟಿಮಾಡಿಕೊಂಡದ್ದು ಕಾಣುವ ಮಾನವೀ ಹೃದಯದ ನಯನಗಳಿಗೆ ಕಿಡಿಯೊತ್ತುವಂತಿತ್ತು. ಒಬ್ಬರನ್ನೊಬ್ಬರು ಅರಳುಗಣ್ಣುಗಳಿಂದ ನೋಡುವ ತೀಕ್ಷ್ಣತೆಯು ಮಾತ್ರವಲ್ಲದೆ, ಮಾರಿನಿಂದ ಇಬ್ಬರೂ ತಮ್ಮ ಚಾಕುಗಳನ್ನು ಎತ್ತಿದಾಗ ಕೆಲಸೆಕುಂದ ಯಾರು ಯಾರನ್ನು ಪ್ರಥಮ ಇರಿಯುವರೆಂಬುದು ತಿಳಿಯದ ಸಮಸ್ಯೆಯಾಯಿತು. ಇಬ್ಬರೂ ಸಮಬಲರು, ದೃಢವಾದ ಮೈಕಟ್ಟು. ಇಬ್ಬರ ಇರಿತವೂ ಇರಿಯಲ್ಪಡುವವನನ್ನು ಸಜೀವವಾಗಿ ಇರಗೊಳಿಸಲಾರದೆಂದು ಕೂಸ್ತ್ರಾ ಬಲೋಕ್ತಿಯ ತುಲನಾತ್ಮಕ ದೃಷ್ಟಿಗೆ ಹೊಳೆದಂತಿತ್ತು.

ಅವರೆಷ್ಟು ಸೆಕುಂದ ಈ ತರವಾದ ವಿಕರಾಳಸ್ವರೂಪದಾಗಿದ್ದರೆಂದು ಹೇಳಲು ನನ್ನ ಬಳಿ ಗಡಿಯಾರವಿದ್ದಿಲ್ಲ. ಅಲ್ಲದೆ ಅವರ ಮನಸ್ಸಿನ ಅಂತರಂಗದ

— ೧೬ ನೇ ಪುಟಕ್ಕೆ

*(ಕಥೆ ಪಾಕಿಸ್ತಾನ ಸ್ಥಾಪನೆಯಾಗುವ ಮುಂಚೆ ನಡೆದದ್ದು)

Reg. No. B. 3148

LICENCE No. 3
Licenced to Post without Prepayment

## ಈ ವಾರದ ಕಥೆ

( ೧೫ ನೇ ಪುಟದಿಂದ )

ಭಾವೋದ್ರೇಕವು ಎತ್ತೆತ್ತ ನಡೆದು, ಓಡಿ, ಹಾರಿ ಹೋಗುಬಿಟ್ಟಿದೆ-ಎಂದು ಹೇಳಲು ಪರಕಾಯ ಪ್ರವೇಶವಿದ್ಯೆಯು ನನಗೆ ತಿಳಿದಿಲ್ಲವಾಗಿತ್ತು. ಹಾಗೆ ಹಮೀದನು ಕೇಶವನ ಮುಖವನ್ನೂ, ಕೇಶವನು ಹಮೀದನ ಮುಖವನ್ನೂ ತೀಕ್ಷ್ಣ ದೃಷ್ಟಿಯಿಂದ ನೋಡುತ್ತಿದ್ದರು.

ಥಕ್ಕನೆ- ಹಮೀದನ ಬಿಗಿ ಹಿಡಿದ ಚಾಕು ಮಾತ್ರ ಕೈಜಾರಿ ನೆಲಕ್ಕೆ ಬಿದ್ದುಬಿಟ್ಟಿತು. ಈಗ ಕೇಶವನಿಗೆ ಇರಿಯಲು ಸುಲಭವಾದಂತಾಯಿತು. ಬಿದ್ದ ಚಾಕು ಮಾತ್ರ ಅಲ್ಲಿಯೂ ತನ್ನ ಹಗೆಯನ್ನು ತೀರಿಸಿಕೊಳ್ಳದಿರಲಾರೆನೆಂದು ಭೂಮಿಯನ್ನು ಎರಡಿಂಚು ತಿವಿತು.

“ಕೇಶವ- ಈ ಮಿತ್ರ ದ್ರೋಹಿಯಾದ ಹಮೀದನನ್ನು ಖಂಡಿತ ಇರಗೊಡಿಸದಿರು. ಇದರಿಂದ ಮಾನವೀ ಜನಾಂಗದ ಮನುಷ್ಯತ್ವವು ಪರಸ್ಪರ ಸಮತೆ ಬಂಧುತ್ವದಿಂದ ಬಾಳಿ ಬೆಳಗಲಾರದು. ನಿನ್ನಂಥ ಸಹೃದಯ ಮಿತ್ರನನ್ನು ಹತ್ಯೆಮಾಡಲು ಕೈಯೆತ್ತಿದ ದೋಷಕ್ಕೆ ನಿಜವಾಗಿಯೂ ಕ್ಷಮಿಸು. ಬರೀ ಕ್ಷಮೆಯೊಂದನ್ನು ಕೊಡದಿರು. ಕ್ಷಮಿಸಿ, ದ್ರೋಹಿಯಾದ ನನ್ನಿಂದ್ಲ ಇನ್ನು ಈ ತೆರವಾಗಿ ಬಳಲಿರುವ ತೊಡಕನ್ನು ಪರಿಹರಿಸಿಕೊ. ಹಾ! ಗುರುತಿಸಿದೆ—ಕೇಶವಾ— ಗುರುತಿಸಿದೆ. ನೀನು ಮಾತ್ರ ಅರಿಯದಾದೆ. ಹಿಂದೊಂದು ಭಾರಿ ಬಂಡೆಯಿಂದ ನೀನು ಎಡವಿ ಬಿದ್ದಂದಿನ, ಆ ರಕ್ತ ರಂಜಿತ ವದನವು ಇಂದು ಮಾತ್ರ ನನ್ನ ಕಣ್ಣುಗಳಿದಿರು ನಲಿಯುತ್ತಿದೆ. ಆ ಗತಕಾಲದ ದೃಶ್ಯ-” ತಡೆದು, “ನನ್ನಿಂದಲೇ ಅಂದು ನಿನ್ನ ಪ್ರಾಣ ಉಳಿಯಿತು; ಇಂದು ನನ್ನಿಂದ ತೆಗೆಯಲ್ಪಡುವದೆಂದರೆ ಎರಡು ಅಧಿಕಾರವೂ ನನ್ನಲ್ಲಿ ಆಯಿತೇ? ಆ ನಮ್ಮ ಪರಸ್ಪರ ಸ್ನೇಹವೆಲ್ಲಿ, ಈ ತರದ ಅಕೃತ್ಯವೆಲ್ಲಿ? ಕ್ಷಮಿಸದಿರು. ನಿಜವಾಗಿಯೂ. . .ಜಿನ್ನಾ” ಎಂದು ಮಾತು ಮುಂದರಿಸುವಂತೆಯೆ ತಲೆ ತಗ್ಗಿಸಿ ಕೇಶವನ ಅತಿ ಸನಿಹದಲ್ಲಿ ಹಮೀದನು ದಢಾಲನೆ ಭೂಮಿಗೆ ಬಿದ್ದುಬಿಟ್ಟನು.

ಈ ತರದ ಮಿತ್ರನ ಮಾತುಗಳನ್ನು ಕೇಳಿದೊಡನೆ ಮನ ಕರಗಿ ಕೇಶವನ ಕಣ್ಣುಗಳೆರಡರಲ್ಲಿಯೂ ಟಪಟಪನೆ ಒಂದೆರಡು ಹನಿ ಉದುರಿರಬೇಕು. ಮಿತ್ರನು ಬಿದ್ದುದನ್ನು ಕಂಡು ಗಾಬರಿಯಿಂದ, ಅತನನ್ನು ಎಬ್ಬಿಸಿ ಶೈತ್ಯೋಪಚಾರ ಮಾಡಿದನು. ಕೆಲ ನಿಮಿಷದಲ್ಲಿ ಹಮೀದನು ಕಣ್ಣು ತೆರೆದನು. ಕೇಶವನನ್ನು ಪುರಪುರನೆ ನೋಡುತ್ತ “ಜಿನ್ನಾ ನನ್ನನ್ನಂತೂ ಕೆಡಿಸಿದೆ. ಆದರೆ ಮಾನವ ಜನಾಂಗವನ್ನು ಕೆಡಿಸದಿರು. ಆದರಿಂದ ನಮ್ಮ ಪವಿತ್ರ ಖುರಾನ್ ಶರೀಫ್‌ನ ಹೆಸರನ್ನು ನೀಚವಾಗಿ ಮಾಡದಿರು. ಮಾನವನ ಒಳಿತಿಗಾಗಿ ಮಾಡಿದ ಧರ್ಮದ ಹೆಸರಿಗೆ ಕಳಂಕವನ್ನು ತರದಿರು. ಆ ನಿನ್ನ ಪಾಕಿಸ್ತಾನ ಮಾನವರಿಗಲ್ಲ, ದಾನವರಿಗೆ! ಬೇಡರಿ. ಎಂದಿಗೂ ಬೇಡ- ಹಿಂದುಗಳೆಂದರೆ ಯಾರು? ಆ ನಿನ್ನ ಪಾಕಿಸ್ತಾನದ ಮುಸಲ್ಮಾನರೆಂದರೆ ಯಾರು ? ಬಿಡಿಸಿ ಹೇಳಲಾರೆಯಾ? ಹಿಂದುಗಳನ್ನು ಕೊಂದರೆ ಪವಿತ್ರಪುಣ್ಯವುಂಟೆಂದು ಸೂಚಿಸುವ ಆ ಮುಖಂಡನು ಎಷ್ಟು ಹಿಂದುಗಳನ್ನು ಕೊಂದಿರುವನು ಎಂಬುದನ್ನು ಕೇಳಬರುವೆನು. ಇದಾರು ಕೇಶವನೇ? ಛಿಡು. ನೀನ್ಯಾಕೆ ಇಲ್ಲಿಗೆ ಬಂದೆ” ಎಂದು ಹೇಳುತ್ತೆ ಎದ್ದುನಿಂತನು. ಕೇಶವನು ತಡೆದು ವ್ಯಥಿತಸ್ವರದಿಂದ “ಪ್ರಿಯಾ, ಏನೆನ್ನುವೆ? ನನಗೆ ಒಂದೂ ತಿಳಿಯದು. ಹೇಗೂ ಇರಲಿ. ನಿನಗೆ ಬಹುಶಃ ಹುಚ್ಚು ಹಿಡಿಯಿತೇ? ಸ್ವಲ್ಪ ಹೇಳಲಾರೆಯಾ?” ಎನ್ನುವಷ್ಟರಲ್ಲಿಯೇ ನಡುವೆ ಹಮೀದನು “ನನಗಲ್ಲ ಹುಚ್ಚು. ಆ ನನ್ನ ಭಾರತವನ್ನು ತುಂಡರಿಸಲು ಮನುಷ್ಯತ್ವವನ್ನು ಬಲಿಯರ್ಪಿಸಿ ಸಾಧಿಸುವ ಜಿನ್ನಾಸಾಹೇಬರಿಗೆ!” ಎಂದನು.

ಕೇಶವನಿಗೆ ಇದೆಲ್ಲದರ ಅರ್ಥವಾಯಿತೋ ಇಲ್ಲವೋ ಯಾರು ತಿಳಿವರು? ಆದರೆ ಹಮೀದನನ್ನು ಆತನ ಮಲಗುವ ಕೋಣೆಗೆ ಕರೆಕೊಂಡು ಹೋಗಿ ಮಲಗಿಸಲು ಪ್ರಯತ್ನಪಡುತ್ತಿರುವಂತೆಯೇ, ಹಮೀದನು ತನ್ನೆರಡು ಕೈಗಳಿಂದ ಕೇಶವನ ಕುತ್ತಿಗೆಯನ್ನು ಬರಸೆಳೆದು, ತನ್ನ ತಲೆಯನ್ನು ಕೇಶವನ ಭುಜದ ಮೇಲಿಟ್ಟು “ಕೇಶವಾ” ಎಂದೆನ್ನುತ್ತ ಮಾತು ಇನ್ನು ಮುಂದುವರಿಸದಾದನು.

ಈ ಪತ್ರಿಕೆಯು ಹುಬ್ಬಳ್ಳಿ ಸಂಯುಕ್ತ— ಕರ್ನಾಟಕ ಮುದ್ರಣಾಲಯದಲ್ಲಿ ‘ಲೋಕಶಿಕ್ಷಣ ಟ್ರಸ್ಟ’ ದ ಪರವಾಗಿ ಹ. ರಾ. ಪುರೋಹಿತರವರಿಂದ ಮುದ್ರಿತವಾಗಿ ಪ್ರಕಟವಾಯಿತು.

## ಪುಸ್ತಕ ಮತ್ತು ವಿಮರ್ಶೆ

( ೨ ನೇ ಪುಟದಿಂದ )

ಉಜ್ವಲವಾಗಿವೆ. ಆಯಾಕಾಲದ ಈ ಅಂಗೋಪಾಂಗಗಳ ಅಭಿವೃದ್ಧಿಯನ್ನು ಲೇಖಕರು ಪ್ರಸ್ತುತ ಪುಸ್ತಕದಲ್ಲಿ ಸಾಧಾರವಾಗಿ ವಿವೇಚಿಸಿದ್ದಾರೆ. ಮೊಹೆಂಜದಾರೊ, ಇಜಿಪ್ತ, ಸುಮೇರ, ಐಬೀರಿಯಾ ಮತ್ತು ಅಯರ್ಲಂಡದ ಪ್ರಾಚೀನ ನಾಗರಿಕತೆಯೊಡನೆ ಪ್ರಾಚೀನ ಕರ್ನಾಟಕ ತನ್ನ ಸಂಬಂಧವನ್ನು ನೇರವಾಗಿ ಇಟ್ಟುಕೊಂಡಿದ್ದಿತೆಂಬುದನ್ನು ಪ್ರಸ್ತುತ ಲೇಖಕರು ಸ್ಪಷ್ಟಪಡಿಸಿದ್ದಾರೆ. ಐತಿಹಾಸಿಕ ಆಧಾರ ಸಹಿತವಾಗಿ ಬರೆಯಲ್ಪಟ್ಟ ಈ ಪುಸ್ತಕದ ಉಪಯೋಗವನ್ನು ಕನ್ನಡಿಗರಷ್ಟೇ ಅಲ್ಲ ಕನ್ನಡೇತರರು ಕೂಡ ಮಾಡಿಕೊಂಡು ಕರ್ನಾಟಕದ ಪ್ರಾಚೀನ ಮತ್ತು ಮಧ್ಯಯುಗೀನ ಸಾಂಸ್ಕೃತಿಕ ಇತಿಹಾಸವನ್ನು ತಿಳಿದುಕೊಳ್ಳಬೇಕು. ಇಂಥ ಉಪಯುಕ್ತ ಪುಸ್ತಕವನ್ನು ಬರೆದುದಕ್ಕಾಗಿ ಗ್ರಂಥಕರ್ತರು ಅಭಿನಂದನಾರ್ಹರಾಗಿರುವರು. ಕನ್ನಡನಾಡಿನ ಸುಪುತ್ರರೂ ದಾನಶೂರರೂ ಆದ ಶ್ರೀ ಕೆ. ಎಚ್. ಕಬ್ಬೂರರು ಈ ಪುಸ್ತಕಕ್ಕೆ ಉದಾರ ಧನ ಸಹಾಯವನ್ನು ಮಾಡಿದ್ದಾರೆ ಕರ್ನಾಟಕದ ಸಾಂಸ್ಕೃತಿಕ ಸಂವರ್ಧನೆಗಾಗಿಯೇ ಸ್ಥಾಪಿತವಾಗಿರುವ ಕರ್ನಾಟಕ ವಿದ್ಯಾವರ್ಧಕ ಸಂಘವು ಇದನ್ನು ಪ್ರಕಟಿಸಿದ್ದು ಉಚಿತವೆ ಆಗಿದೆ.

### Shrimad Bhagavadgita or The Lord's Songs

By Magadal Ramachandra Gitashram 4th Cross Road Chamaraj Pet Bangalore City. PP. 300 Price 12 Annas Only.

ಶ್ರೀ ಮಗದಾಳ ರಾಮಚಂದ್ರರಾಯರು ಭಗವದ್ಗೀತೆಯನ್ನು ಚೆನ್ನಾಗಿ ಅಭ್ಯಾಸ ಮಾಡಿ ಅದರ ಸಾರವನ್ನು ಸವಿದವರು. ಈ ಮೊದಲು ಗೀತೆಯ ಬಗ್ಗೆ ಹಲವು ಪುಸ್ತಕಗಳನ್ನು ಬರೆದು ಪ್ರಸಿದ್ಧರಾದವರು. ಇದೀಗ ಅಂಗ್ಲ ಭಾಷೆಯ ಅರ್ಥದೊಡನೆ ಈ ಪುಸ್ತಕವನ್ನು ಪ್ರಸಿದ್ಧಿಸಿರುವರು. ದೇವನಾಗರಿ ಲಿಪಿಯಲ್ಲಿ ಮೂಲವನ್ನೂ ಅದರ ಕೆಳಗೆಇಂಗ್ಲಿಶ ಅನುವಾದವನ್ನೂ ಕೊಟ್ಟಿರುವರು. ಅಲ್ಲದೆ ಕೊನೆಯಲ್ಲಿ ಗೀತೆಯಲ್ಲಿ ಬಂದಿರುವ ಯೌಗಿಕ ಶಬ್ದಗಳ ಅರ್ಥವಿವರಣೆಯನ್ನು ಮಾಡಿರುವರು. ಪುಟ್ಟದೊಂದು ಪ್ರಸ್ತಾವನೆಯನ್ನು ಬರೆದು ಭಗವದ್ಗೀತೆಯ ಮಹತ್ವವನ್ನರುಹಿದ್ದಾರೆ. ಭಗವದ್ಗೀತೆಯ ಮೇಲೆ ಎಷ್ಟೆಷ್ಟು ಹೊಸ ಪುಸ್ತಕಗಳು ಹೊರಬಿದ್ದರೂ ಅವಶ್ಯವೆ. ಏಕೆಂದರೆ ಆಯಾ ಗ್ರಂಥಕರ್ತರು ಭಗವದ್ಗೀತೆಯಲ್ಲಿ ತಮಗೆ ಕಂಡು ಬಂದ ಮಹತ್ವವನ್ನನುಲಕ್ಷಿಸಿ ಅದರ ಮಾಹಾತ್ಮ್ಯವನ್ನು ಬಣ್ಣಿಸುವದುಂಟು. ಪ್ರಸ್ತುತ ಲೇಖಕರು ಭಗವದ್ಗೀತೆಯಲ್ಲಿಯ ಬುದ್ಧಿಯೋಗಕ್ಕೇ ಪ್ರಾಶಸ್ತ್ಯ ಕೊಟ್ಟು ತಮ್ಮ ಅನುವಾದಕ್ರಮವನ್ನು ಸಾಗಿಸಿದ್ದಾರೆ. ಭಗವದ್ಗೀತೆಯು ಅಷ್ಟೊಂದು ಸಾರವುಳ್ಳದ್ದಾಗಿರುವದರಿಂದ ಬೇರೆ ಬೇರೆ ಜನರು ಅದರಲ್ಲಿಯ ಬೇರೆ ಬೇರೆ ವಿಷಯಗಳಿಗೆ ಮಹತ್ವ ಕೊಟ್ಟುದುಂಟು. ಆಧುನಿಕ ಲೇಖಕರಲ್ಲಿ ಲೋಕಮಾನ್ಯರು ಕರ್ಮಯೋಗಕ್ಕೆ ಮಹಾತ್ಮರು ಅನಾಸಕ್ತಿಯೋಗಕ್ಕೆ ಮಹತ್ವ ಕೊಟ್ಟಿದ್ದಾರೆಂಬುದು ಪ್ರಸಿದ್ಧವಾದುದು. ಪ್ರಸ್ತುತ ಲೇಖಕರು ಬುದ್ಧಿಯೋಗಕ್ಕೆ ಮಹತ್ವ ಕೊಟ್ಟಿದ್ದಾರೆ. ಈ ಮೊದಲು ಶ್ರೀ ಮಗದಾಳರು ಕನ್ನಡದಲ್ಲಿ ಬುದ್ಧಿಯೋಗವನ್ನು ಪ್ರಸಿದ್ಧಿಸಿದ್ದನ್ನು ನಮ್ಮ ವಾಚಕರು ಬಲ್ಲರು. ಭಗವದ್ಗೀತೆಯು ಕೇವಲ ಯಾವುದೊಂದು ಯೋಗವನ್ನು ಹೇಳಿರದೆ ಮಾನವನ ಮೋಕ್ಷಕ್ಕೆ ಕಾರಣವಾದ ವಿವಿಧ ಯೋಗಗಳೂ ಇದರಲ್ಲಿ ಪ್ರತಿಪಾದಿತವಾಗಿವೆ. ಆಯಾ ಅಧಿಕಾರಿಗಳು ತಮಗೆ ಯುಕ್ತವಾದ ರೀತಿಯಲ್ಲಿ ಗೀತೆಯ ಮಹಿಮೆಯನ್ನು ತಿಳಿದುಕೊಂಡು ಪರಮಾತ್ಮನ ಆದೇಶದಂತೆ ಆಚರಿಸಿ ಸಂಸಾರಬಂಧವನ್ನು ಹರಿದೊಗೆವುದು ಅವಶ್ಯವಾಗಿದೆ. ಶ್ರೀ ಮಗದಾಳರು ಗೀತೆಯ ಬುದ್ಧಿಯೋಗದ ಅನುವಾದವನ್ನು ಅಂಗ್ಲ ಭಾಷಾಭಿಜ್ಞರಿಗಾಗಿ ಪ್ರಸಿದ್ಧಿಸಿ ಪ್ರಶಂಸಾರ್ಹರಾಗಿರುವರು.

### ಪ್ರಭಾತ (ಸ್ವಾತಂತ್ರ್ಯಾಂಕ)

ಸಂಪಾದಕರು ಮತ್ತು ಪ್ರಕಾಶಕರು ಶ್ರೀ ಕೆ. ವಿ. ಶೆಟ್ಟಿ, ಪುಟ ೧೫೯. ಬೆಲೆ ರೂ. ೧.

ಸ್ವಾತಂತ್ರ್ಯದ ಪ್ರಭಾತದಲ್ಲಿ ಉದಯಿಸಿದ “ಪ್ರಭಾತ”ವನ್ನು ನೋಡಲು ಆನಂದವಾಗುತ್ತದೆ. ಶ್ರೀ ಗೋವಿಂದ ಪೈ! ಮೊದಲಾದ ಹಲವು ಉತ್ತಮ ಲೇಖಕರ ವಿವಿಧ ಲೇಖನಗಳಿಂದ ಸಂಚಿಕೆ ಅಲಂಕೃತವಾಗಿದೆ. ವಿಚಾರ ಪ್ರಚೋದಕ ಪ್ರಬಂಧಗಳೂ ಸುಂದರ ಚಿತ್ರಗಳೂ ಪುಸ್ತಕದ ಒಪ್ಪವನ್ನು ಹೆಚ್ಚಿಸಿವೆ. ಶ್ರೀಗಳಾದ ಬಿ. ಜಿ. ಕುಲಕರ್ಣಿ, ಬನ್ನಂಜೆ ರಾಮಾಚಾರ್ಯ, ಎಂ. ವಿ. ಪ್ರಭು ಮೊದಲಾದವರ ಲಘುವಾದ ಶೈಲಿಯ ಬರಹಗಳು ಹೃದ್ಯವಾಗಿವೆ; ಶ್ರೀ ಡಿ. ಕೆ. ಭಾರದ್ವಾಜ ಮುಂತಾದವರ ಶಾಸ್ತ್ರೀಯ ಲೇಖನಗಳೂ ಇವೆ. ಹೀಗೆ ವಿಚಾರ, ವಿನೋದ ಮುಂತಾದ ವಿವಿಧ ಭಾವೋದ್ಬೋಧಕ ಲೇಖನಗಳನ್ನು ‘ಪ್ರಭಾತ’ವು ಮೇಲಿಂದ ಮೇಲೆ ಬೆಳಕಿಗೆ ತರುತ್ತಿರಲೆಂದು ಹಾರೈಕೆ.

## ಕವಿಯ ಕೃತಜ್ಞತೆ

(ಹಂಸಧ್ವನಿ ರಾಗ)

ಎನಿತುಪಕಾರವೊ ಕವಿಗೆ ನಿನ್ನದು! ।
ಇನಿದು ಸೃಷ್ಟಿಯಾತನಿಗಿನಿದು ॥ಪ॥

ನಿರ್ಮಮನಾಗೆಲ್ಲವನೋ ಲಯಿಸುವ
ನಿರ್ಮಲಹೃದಯನಾತನಿಗಿತ್ತು ! ।
ಕರ್ಮದ ತೊಡಕನು ಬಿಡಿಸುವ ನೀತಿಯ
ಮರ್ಮವನವನಿಗೆ ತೋರಿದೆ, ತಂದೆ! ॥೧॥

ಕರುಣಾಂಬುಧಿ ಔದಾರ್ಯದ ಹೂವಿನ
ಪರಿಮಳವನು ನೀ ನಾತನಿಗುಣಿಸಿ ।
ಕರೆಯಿಸುತವನಿಂದಮೃತದ ಸರಿಯನು
ಗುರುಪದವಿಯನಾತನಿಗೊದವಿಸಿದೆ! ॥೨॥

ನಿಂತಾತನ ಹೃದಯದಲಿ ನೀನು, ಜಗ-
ದಂತರ್ಯಾಮಿ, ಸುಭೋಧನಿಧಿ! ।
ಶಾಂತಿಯ ಸೂಕ್ತವನೋದಿಸಿ ಜಗದದು- ।
ರಂತದ ದುಮ್ಮಾನವನಳಿಯಿಸಿದೆ! ॥೩॥

—ಸಾಲಿ ರಾಮಚಂದ್ರರಾಯ

## ಸಾದರ ಸ್ವೀಕಾರ

### ೧ ಸೆರೆಮನೆಯ ಶೂರ

ಲೇಖಕರು ಶ್ರೀ ವಾಸುವಾಚಾರ್ಯ ಬುರ್ಲಿ ಬಾಗಲಕೋಟಿ- ಪ್ರಕಾಶಕರು: ‘ಮಿಂಚಿನ ಬಳ್ಳಿ’ ಕಾರ್ಯಾಲಯ ಧಾರವಾಡ. ಪುಟಗಳು ೨೧೦ ಬೆಲೆ ೨-೮-೦.

### ೨ ಕಥಾಚಂದ್ರಿಕೆ ಮತ್ತು ಆನಂದಕಂದ--(ಮಾಸ ಪತ್ರಿಕೆಗಳು)

ಸಂಪಾದಕರು ಜೆ. ಎಸ್. ಕೃಷ್ಣರಾವ- ಪುಟಗಳು ೩೬ ಬೆಲೆ ೨ ಆಣೆಗಳು.

ವಿವಿಧ ವಿನೋದ- ವಿಮರ್ಶಾತ್ಮಕ ಮತ್ತು ವಿಚಾರ ಪರಿಪ್ಲುತ ಲೇಖಗಳಿಂದೊಡಗೂಡಿದ ಮಾಸಿಕಗಳು ವಿಶೇಷವಾಗಿ ಬಾಲಕರಿಗೆ ಬಹು ಉಪಯುಕ್ತವಾದವುಗಳಾಗಿವೆ.

## ನಾಯಿ ಮದುವೆಗೆ ಲಕ್ಷ ರೂ.

ಜುನಾಗಡದ ನವಾಬರ ಹತ್ತಿರ ೧೨೦೦ ನಾಯಿಗಳಿವೆಯಂತೆ. ಈ ಶ್ವಾನಪ್ರಿಯರು ತಮ್ಮ ನಾಯಿಯೊಂದರ ಮದುವೆಗೆ ೧ ಲಕ್ಷ ರೂಪಾಯಿಗಳನ್ನು ಒಮ್ಮೆ ಖರ್ಚ ಮಾಡಿದರಂತೆ !

## ಜಗತ್ತಿಗೊಂದು ಅಂತರ್-ರಾಷ್ಟ್ರೀಯ ಸರಕಾರ ಅವಶ್ಯಕ

( ೧ ನೇ ಪುಟದಿಂದ )

ಆಸಕ್ತಿವಹಿಸಬಹುದು. ಆದರೆ ರಶಿಯ ಮಾತ್ರ ಈ ಯಾವುದರಲ್ಲೂ ಭಾಗವಹಿಸುವದು ಕಂಡು ಬರದು! ಏಕೆ? ಬಹುಶಃ ತನ್ನ ಪ್ರಶ್ನೆ ಬಿಡಿಸುವದರಲ್ಲಲ್ಲದೆ ಇನ್ನೊಬ್ಬರದನ್ನು ಬಗೆಹರಿಸುವುದರಲ್ಲಿ ಕೈಹಾಕುವ ವ್ಯವಹಾರವೇ ಅದಕ್ಕಿಲ್ಲದಿರಬಹುದು. ಅಥವಾ ಅದು ಆಗಲೇ ಶಕ್ತಿಮೀರಿ ಅಬಗ್ಗೆ ಪ್ರಯತ್ನಿಸಿರಬಹುದು-ಸಂಘವನ್ನು ಸೇರಿಸಿಕೊಂಡು ತನ್ನದೊಂದು ಪ್ರಶ್ನೆಯನ್ನು ಬಿಟ್ಟು ಉಳಿದೆಲ್ಲವನ್ನೂ ದುರವಸ್ಥೆಗೆ ಗುರಿಮಾಡಿರಬಹುದು.

ಸಂಯುಕ್ತ ರಾಷ್ಟ್ರಸಂಘವು ಪ್ರಭಾವಿಯಾಗದಿರುವುದಕ್ಕೂ ರಶಿಯವು ಮಿತಿಮೀರಿ ಪ್ರತಿಷೇಧಾಧಿಕಾರವನ್ನು ಪ್ರಯೋಗಿಸುತ್ತಿರುವುದಕ್ಕೂ ಇದೇ ಕಾರಣವಾಗಿರಬಹುದು. ಅಸಹಕಾರಿಯಾದ ರಶಿಯದೊಡನಿರುವ ಸಂ. ರಾ. ಸಂಘವು ಜಾಗತಿಕ ರಾಜಕೀಯ ಮತ್ತು ಸಾಮಾಜಿಕ ಪ್ರಗತಿಯನ್ನು ಕುಂಠಿಸುತ್ತದೆ.

ಆದರೆ ತಪ್ಪು ಅಮೇರಿಕ, ಇಂಗ್ಲಂಡು, ಫ್ರಾನ್ಸುಗಳದಿದ್ದರೂ ಇರಬಹುದು; ಅದೂ ತಕ್ಕವಿಲ್ಲದಿಲ್ಲ. ರಶಿಯದೊಡನೆ ಸಂ. ರಾ. ಸಂಘವು ಕೂಡಲೆ ಅಂತರ್ರಾಷ್ಟ್ರೀಯ ಸರಕಾರವಾಗಿ ಮಾರ್ಪಡಬೇಕು. ಅಲ್ಲದಿದ್ದರೆ, ಆದು ಅಮೇರಿಕದ ಅಧಿಕಾರಕಕ್ಷೆಯೊಳಗೆ ಬಿದ್ದುಬಿಡುತ್ತದೆ, ಅದರ ವರ್ಚಸ್ಸಿಗೆ ಆಟಿಯಾಳಾಗುತ್ತದೆ. ಈ ಎರಡು ಸಂಭಾವ್ಯಪರಿಣಾಮಗತ್ತ ಲಕ್ಷ್ಯಕೊಡಲು ಪ್ರಜಾತಂತ್ರರಾಷ್ಟ್ರಗಳು ಸಿದ್ಧವಾಗಿಲ್ಲದಿರಬಹುದು. ಆದುದರಿಂದಲೇ ಸಂ. ರಾ. ಸಂಘವು ಕುಂಟುತ್ತ, ಕೂರುತ್ತ ಒಂಟೆತ್ತಿನ ಗಾಡಿಯಂತೆ ಸಾಗುತ್ತಿದೆ; ಮತ್ತು ಜನರು—ಅದರಲ್ಲೂ ತರುಣರಾದವರು—ದಿನೇ ದಿನೇ ಸಂಯುಕ್ತ ರಾಷ್ಟ್ರಸಂಘದಲ್ಲಿಯ ತಮ್ಮ ಶ್ರದ್ಧೆಯನ್ನು ಕಳೆದು ಚಾರ್ವಾಕರೂ ವಿಡಂಬಕರೂ ವಕ್ರದೃಷ್ಟಿಗಳೂ ಆಗುತ್ತಿರುವರು.

ಆದುದರಿಂದ ಒಟ್ಟಿನ ಮೇಲೆ ಒಂದೇ ಮಾತಿನಲ್ಲಿ ಹೇಳುವದಾದರೆ, ವರಿಷ್ಠ ರಾಷ್ಟ್ರತ್ರಯದಲ್ಲಿ ಒಮ್ಮತವುಂಟಾದರೆ ಮಾತ್ರ ಸಂ. ರಾ. ಸಂಘವು ಪರಿಣಾಮಕಾರಿಯಾಗಿ ಕೆಲಸ ಮಾಡಬಹುದು. ಹಿಂದೆ ಹೇಳಿದಂತೆ ಪ್ರತಿಷೇಧಾಧಿಕಾರವನ್ನು ಈ ದೃಷ್ಟಿಯಿಂದಲೇ ಸ್ವೀಕರಿಸಲಾಗಿತ್ತು. ಸಂಘದ ನೆಲಗಟ್ಟಿಗೆ ಎಷ್ಟುಗೆದ್ದಲು ಹತ್ತಿದೆಯೆಂಬುದು ಆಗಾಗ ಉಂಟಾಗುವ ಬಿಕ್ಕಟ್ಟುಗಳಿಂದ ತಿಳಿದು ಬಂದಿದೆ. ಆಗಲೇ ಸೂಚಿಸಿದ ಪ್ರಕಾರ ರಶಿಯ ಸಹಿತವಾಗಿ ಸಂ. ರಾ. ಸಂಘವು ಒಂದು ಜಾಗತಿಕ ಸರಕಾರವಾಗಿ ನಿಂತರೆ ಮಾತ್ರ ಜಗತ್ತು ಒಳ್ಳೆಯದನ್ನು ಕಾಣಬಹುದು. ಹಾಗಾಗುವುದು ಬ್ರಿಟನ್ ಮತ್ತು ಅಮೇರಿಕಗಳಿಗೆ ಬೇಡಾಗಿದೆ; ಎಂದ ಮೇಲೆ ಕೇವಲ ರಶಿಯ ಒಂದರಿಂದಲೇ ಸಂಘ ನಿಷ್ಪ್ರಭವಾಗಿದೆಯೆಂದರೆ ತಪ್ಪಾಗುವುದಿಲ್ಲವೆ?